# ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ ಸಾಂಸ್ಕೃತಿಕ ಸಂಘರ್ಷ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕ
ಚಂದ್ರಪ್ಪ ಎಸ್.ಸಿ.

ಮಾರ್ಗದರ್ಶಕ
ಡಾ. ಕೆ.ಸಿ.ಶಿವಾರೆಡ್ಡಿ





ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ.
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮

292

# ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ ಸಾಂಸ್ಕೃತಿಕ ಸಂಘರ್ಷ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ



ಸಂಶೋಧಕ
ಚಂದ್ರಪ್ಪ ಎಸ್.ಸಿ.

ಮಾರ್ಗದರ್ಶಕ
ಡಾ. ಕೆ.ಸಿ.ಶಿವಾರೆಡ್ಡಿ






ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೮

# ಪ್ರಮಾಣ ಪತ್ರ

'ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ : ಸಾಂಸ್ಕೃತಿಕ ಸಂಘರ್ಷ ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ. ಕೆ.ಸಿ.ಶಿವಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೫. ೧೦. ೨೦೦೮.

ಸ್ಥಳ : ಕುಪ್ಪಳಿ.

ಎನ್. ಸಿ.

( ಚಂದ್ರಪ್ಪ ಎನ್.ಸಿ. )
ಸಂಶೋಧನಾ ವಿದ್ಯಾರ್ಥಿ,
ಕನ್ನಡ ಭಾಷಾ ಅತಿಥಿ ಉಪನ್ಯಾಸಕರು,
ಸರ್ಕಾರಿ ಪದವಿ ಪೂರ್ವ ಕಾಲೇಜು,
ಮಾಲೂರು, ಕೋಲಾರ ಜಿಲ್ಲೆ
ದೂರವಾಣಿ : ೯೪೪೮೧೪೮೨೨೩.

## ದೃಢೀಕರಣ ಪತ್ರ

ಶ್ರೀ ಚಂದ್ರಪ್ಪ ಎನ್.ಸಿ. ಇವರು 'ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ : ಸಾಂಸ್ಕೃತಿಕ ಸಂಘರ್ಷ ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 15.10.08

ಸ್ಥಳ : ಕುಪ್ಪಳಿ.

(ಡಾ. ಕೆ.ಸಿ.ಶಿವಾರೆಡ್ಡಿ )
ಮುಖ್ಯಸ್ಥರು,
ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ : ಸಾಂಸ್ಕೃತಿಕ ಸಂಘರ್ಷ

### ಪರಿವಿಡಿ


೧. ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿ. ೦೧ - ೦೬

೨. ಕಾರಂತರ ರಾಜಕೀಯ ನೆಲೆಗಳ ಸಂಘರ್ಷಗಳು. ೦೭ - ೧೯
   ೨.೧. ಸ್ವಾತಂತ್ರ್ಯಪೂರ್ವದ ಸಂದರ್ಭದಲ್ಲಿ ಕಾರಂತರು.
   ೨.೨. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಕಾರಂತರು.

೩. ಸಮಾಜ ಸುಧಾರಣೆಯ ಸಾಮಾಜಿಕ ಚಟುವಟಿಕೆಗಳಲ್ಲಿನ ಸಂಘರ್ಷಗಳು. ೨೦ - ೨೮

೪. ಸಾಹಿತ್ಯದ ಮುಖಾಂತರ ಕಾರಂತರ ಸಾಂಸ್ಕೃತಿಕ ಪ್ರತಿರೋಧಗಳು. ೨೯ - ೩೯

೫. ಶಿಕ್ಷಣ ಕ್ಷೇತ್ರದಲ್ಲಿನ ಪ್ರಯೋಗಗಳು. ೪೦ - ೪೮

೬. ಇತರೆ ಕ್ಷೇತ್ರಗಳ ಮೂಲಕ ಕಾರಂತರ ಸಂಘರ್ಷಾತ್ಮಕ ನೆಲೆಗಳು. ೪೯ - ೭೪
   ೬.೧. ರಂಗಭೂಮಿಯಲ್ಲಿ ಕಾರಂತರು.
   ೬.೨. ಪತ್ರಿಕೋದ್ಯಮ ಮತ್ತು ಕಾರಂತರು.
   ೬.೩. ಧಾರ್ಮಿಕ ವಿಚಾರಗಳು ಮತ್ತು ಕಾರಂತರು.
   ೬.೪. ಕಾರಂತರು ಮತ್ತು ಸಿನಿಮಾ.
   ೬.೫. ಪರಿಸರ ಮತ್ತು ಕಾರಂತರು.

೭. ಮುಕ್ತಾಯಕ್ಕೆ ಮುನ್ನ ೭೫ - ೮೧





೮. ಅನುಬಂಧ ೮೨ - ೮೪

ಅಧ್ಯಾಯ - ೧

# ಅಧ್ಯಯನದ ಉದ್ದೇಶ ,ಸ್ವರೂಪ ಹಾಗೂ ವ್ಯಾಪ್ತಿ

" ಸಾವಿಲ್ಲದೆಡೆಯಿಲ್ಲ , ನೋವಿಲ್ಲದೆಡೆಯಿಲ್ಲ
ಸಾವು ಜೀವಕೆ ನಂಟು, ಅದನ್ನು ತಪ್ಪಿಸಬಲ್ಲ
ಸಾವಿನೊಳು ಮರುಗದಿರು, ಜೀವದೊಳು ಹಿಗ್ಗದಿರು
ತಿಳುವಿನೊಳು ನೀ ಬದುಕು ಮುಂದೆ "

-ಶಿವರಾಮ ಕಾರಂತ

# ಅಧ್ಯಯನದ ಉದ್ದೇಶ ,ಸ್ವರೂಪ ಹಾಗೂ ವ್ಯಾಪ್ತಿ

ಸಮಾಜ ಜೀವಿಯಾದ ವ್ಯಕ್ತಿಯು ತಾನು ಬರೆದುಕೊಳ್ಳುವ ಆತ್ಮ ಕಥೆಗಳಲ್ಲಿ ಆತನ ಜೀವನ ಕಥೆಯಂತೆ ಸಮಕಾಲೀನ ಸಮಾಜದ ವಿಭಿನ್ನ ವಿಚಾರಗಳು ಅಭಿವ್ಯಕ್ತಗೊಂಡಿರುತ್ತವೆ. ಅವು ವೈಯಕ್ತಿಕ ಚರಿತ್ರೆಯು ಮಾತ್ರವಾಗಿರದೆ, ಅಂದಿನ ಸಾಮಾಜಿಕ ಪ್ರಕ್ರಿಯೆಗಳಿಗೆ ಪ್ರತಿಕ್ರಿಯಿಸುವ ಸಾಂಸ್ಕೃತಿಕ ಸಂಘರ್ಷಗಳನ್ನು ದಾಖಲಿಸುವಂತಹದ್ದಾಗಿರುತ್ತವೆ. ಆ ಹಿನ್ನೆಲೆಯಲ್ಲಿ ಆತ್ಮಕಥೆಗಳೂ ಸಹ ಆಯಾ ಕಾಲದ ಸಾಂಸ್ಕೃತಿಕ ವಿಚಾರಗಳನ್ನು ಅರಿಯಲು ಬಹಳ ಮುಖ್ಯವಾದ ಆಕರಗಳಾಗುತ್ತವೆ. ಶಿವರಾಮ ಕಾರಂತರ ಆತ್ಮ ಕಥಾನಕಗಳು 'ಜೀವನದಲ್ಲಿನ ಪ್ರಯೋಗಶೀಲತೆ 'ಯ ಅವರ ಬಹುಮುಖ ವ್ಯಕ್ತಿತ್ವಕ್ಕೆ ಸಾಕ್ಷಿಯಂತಿವೆ ಮತ್ತು ಅಂದಿನ ಸಾಂಸ್ಕೃತಿಕ ಸಂಘರ್ಷವನ್ನು ತನ್ನ ಗರ್ಭದಲ್ಲಿರಿಸಿಕೊಂಡಿವೆ. ಇಂಥ ಆತ್ಮ ಕಥಾನಕಗಳಲ್ಲಿ ಅಭಿವ್ಯಕ್ತಗೊಂಡಿರುವ ಸಾಂಸ್ಕೃತಿಕ ಸಂಘರ್ಷವನ್ನು ಅಧ್ಯಯನಕ್ಕೆ ಒಳಪಡಿಸುವುದು ನನ್ನ ಈ ಬರಹದ ಮುಖ್ಯ ಉದ್ದೇಶ.

> '' ವಿಷ್ಣುವಿಗೆ ಬರಿಯ ಹತ್ತು ಅವತಾರಗಳಾದರೆ, ನನ್ನ ಧ್ಯೇಯಗಳು ಹದಿನಾರು ಅವತಾರಗಳನ್ನು ತಳೆಯುವಂತಾಯಿತು. ರಾಷ್ಟ್ರಭಕ್ತಿ , ಸ್ವದೇಶಿ, ವ್ಯಾಪಾರ, ಪತ್ರಿಕೋದ್ಯಮ, ಆಧ್ಯಾತ್ಮ ಸಾಧನೆ, ಕಲೆಯ ಭಿನ್ನ -ಭಿನ್ನ ಮುಖಗಳು - ಫೋಟೋಗ್ರಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಸಿನೆಮ ಇಷ್ಟೂ ಸಾಲದೆ ಸಮಾಜ ಸುಧಾರಣೆ, ಗ್ರಾಮೋದ್ಧಾರ, ಶಿಕ್ಷಣ ಪ್ರಯೋಜನಗಳು, ಉದ್ಯೋಗ - ಇವೆಲ್ಲವುಗಳ ಅವತಾರಗಳೂ ಅವಾಂತರಗಳೂ ಆಗಿಹೋಗಿವೆ ''[೧]

ಎಂದು ಶಿವರಾಮ ಕಾರಂತರೆ ತಮ್ಮ 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಆತ್ಮ ಕಥನದಲ್ಲಿ ಹೇಳಿರುವಂತೆ ಅವರ ವಿಭಿನ್ನ ಪ್ರಯೋಗಗಳು ಅಂದಿನ ಸಮಾಜ ಸಂಸ್ಕೃತಿಗೆ ಎದುರಾದ ನೆಲೆಗಳನ್ನು ಶೋಧಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶ.

ಗಾಂಧೀಜಿಯವರ ಆದರ್ಶಗಳಿಗೆ ಪ್ರಭಾವಿತರಾಗಿ ಕಾಲೇಜನ್ನು ತೊರೆದು ರಾಷ್ಟ್ರಭಕ್ತಿಯ ಸೆಳೆತಕ್ಕೊಳಗಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಸ್ವದೇಶಿ ಸತ್ಯಾಗ್ರಹ, ಅಸಹಕಾರ ಚಳುವಳಿ, ಉಪ್ಪಿನ ಸುಂಕ, ವಿದೇಶಿ ಬಟ್ಟೆಗಳ ಬಹಿಷ್ಕಾರ, ಖಾದಿ ಪ್ರಸಾರ, ಸಬರಮತಿ ಆಶ್ರಮದ ವಾಸ ಹೀಗೆ ರಾಷ್ಟ್ರಭಕ್ತಿಯನ್ನು ಉಸಿರಾಗಿಸಿಕೊಂಡವರು ಕಾರಂತರು. ನಂತರದ ಕೆಲವು ವರ್ಷಗಳಲ್ಲಿ ವಾಸ್ತವ ಜಗತ್ತಿನ ಸತ್ಯವನ್ನು ತಿಳಿದು ದೇಶ ಸೇವೆಯನ್ನು ಮಾಡುತ್ತಿದ್ದೇನೆ ಎಂಬ ಭ್ರಮಾತ್ಮಕ ಲೋಕದಿಂದ ಹೊರಬಂದು 'ದೇಶಸೇವೆ ' ಎಂಬುದು ಬರಿಯ ರಾಜಕೀಯ ಸ್ವಾತಂತ್ರ್ಯವೊಂದೇ ಎಂಬರ್ಥದಲ್ಲಿ ತಿಳಿಯದೆ ತಾವು ಇರುವಲ್ಲಿಯೆ ಸಮಾಜಮುಖಿಯಾಗಿ ನಿಷ್ಠೆ, ಪ್ರಾಮಾಣಿಕತೆಗಳಿಂದ ಮಾಡುವ ಪ್ರತಿಯೊಂದು ಕಾರ್ಯವೂ ಸಹ ದೇಶಸೇವೆ ಎಂದು ಭಾವಿಸಿ ಜೀವನದುದ್ದಕ್ಕೂ ವಿಭಿನ್ನ ನೆಲೆಗಳ

ಸಂಘರ್ಷಗಳಲ್ಲಿ ತೊಡಗಿಕೊಂಡವರು. ಸ್ವಾತಂತ್ರ್ಯ ಪೂರ್ವದಲ್ಲಿದ್ದ ಅವರ ರಾಜಕೀಯ ಕಾರ್ಯಗಳೂ ಸ್ವಾತಂತ್ರ್ಯೋತ್ತರದಲ್ಲಿ ಬದಲಾದ ರಾಜಕೀಯ ವ್ಯವಸ್ಥೆಯಲ್ಲಿ ಬದಲಾದ ಅವರ ಪ್ರಕ್ರಿಯೆಗಳ ಮೂಲಕ ಅಂದಿನ ಸಾಂಸ್ಕೃತಿಕ ಸಂಘರ್ಷದ ಸ್ತರಗಳನ್ನು ಇಲ್ಲಿ ಹುಡುಕಲಾಗುತ್ತದೆ.

ಹಾಗೆಯೇ ಸಾಮಾಜಿಕ ಸಮಸ್ಯೆಗಳಾದ ವಿಧವಾ ವಿವಾಹ, ವೇಶ್ಯಾ ಸಮಸ್ಯೆ , ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ ಮುಂತಾದವುಗಳನ್ನು ಎದುರಿಸುವಾಗಿನ ಸಮಾಜದ, ಸಮುದಾಯಗಳ ಪ್ರತಿರೋಧಗಳು, ವೈಯಕ್ತಿಕವಾದ ಆಘಾತಗಳು, ಬಡತನ ಹೀಗೆ ಮುಖಾಮುಖಿಯಾಗುವ ಸಾಂಸ್ಕೃತಿಕ ಬಗೆಗಳನ್ನು ಈ ಅಧ್ಯಯನ ಒಳಗು ಮಾಡಿಕೊಳ್ಳುತ್ತದೆ.

ಸಮಾಜ ಸುಧಾರಣೆಗೆ ನಾಟಕವೂ ಒಂದು ಸಾಧನ ಎಂದು ತಿಳಿದ ಕಾರಂತರು, ನಾಟಕ, ಯಕ್ಷಗಾನ, ನೃತ್ಯ ಮುಂತಾದ ಕ್ಷೇತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನೇ ಮಾಡಿದರು. ಹಲವಾರು ಅಂತರರಾಷ್ಟ್ರೀಯ ಪ್ರವಾಸಗಳನ್ನು ಕೈಗೊಂಡು ದೇಶದ ಸಂಸ್ಕೃತಿಯನ್ನು ಜಾಗತಿಕ ಮಟ್ಟದಲ್ಲಿ ಪಸರಿಸಿದವರು. ಈ ರೀತಿಯಾದ ಅವರ ಪ್ರವಾಸದ ಅನುಭವಗಳು, ಸಂಗೀತದ ಅಭಿರುಚಿಗಳು, ಧಾರ್ಮಿಕ ವಿಚಾರಗಳಲ್ಲಿನ ಅವರ ಪ್ರತಿಕ್ರಿಯೆಗಳು, ಬದುಕಿನ ಸೋಲು -ಗೆಲುವಿನ ಹೋರಾಟದಲ್ಲಿ ಅವರು ಬದುಕನ್ನು ಸಮಚಿತ್ತದಿಂದ, ತಾಳ್ಮೆಯಿಂದ ಸ್ವೀಕರಿಸಿದ ಬಗೆಗಳು, ಅಂದಿನ ರಾಜಕೀಯ, ಸಾಮಾಜಿಕ, ಸಾಹಿತ್ಯಕವಾದ ಪ್ರಮುಖ ವ್ಯಕ್ತಿಗಳ ಜೊತೆಯಲ್ಲಿನ ಅವರ ಒಡನಾಟಗಳು, ಅಭಿಪ್ರಾಯಗಳು, ಮೌಢ್ಯತೆಗಳನ್ನು ಹೋಗಲಾಡಿಸಲು ಪ್ರಯೋಗಿಸುತ್ತಾ ಬಂದ ವೈಚಾರಿಕ ನೆಲೆಗಟ್ಟಿನ ವಿಜ್ಞಾನದ ವಿಚಾರಗಳು ಇವೆಲ್ಲವುಗಳ ಮುಖಾಂತರವಾಗಿ ಸಾಂಸ್ಕೃತಿಕ ಸಂಘರ್ಷವನ್ನು ಹುಡುಕುವುದು ಈ ಸಂಶೋಧನ ಸಂಪ್ರಬಂಧದ ಆಶಯಗಳಲ್ಲೊಂದಾಗಿದೆ.

ಕಾರಂತರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆಯೂ ಅಪಾರವಾದುದು. ವ್ಯಕ್ತಿಚಿತ್ರ, ಜೀವನ ಕಥೆ, ಪ್ರವಾಸ ಕಥನ, ಕಥೆ, ಕಾದಂಬರಿ, ಗೀತರೂಪಕ, ನಾಟಕ, ಕವಿತೆ, ಹರಟೆ, ಪ್ರಬಂಧ, ವಿಮರ್ಶೆ , ಗ್ರಂಥ ಸಂಪಾದನೆ, ನಿಘಂಟು ರಚನೆ, ಮಕ್ಕಳ ಸಾಹಿತ್ಯ ಹೀಗೆ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಸಮಾಜದ ವಿಭಿನ್ನ ಸಾಂಸ್ಕೃತಿಕ ಮಜಲುಗಳನ್ನು ವಸ್ತುವಾಗಿಸಿ ಅಭಿವ್ಯಕ್ತಿಸಿದ್ದಾರೆ. ಬರಿಯ ಓದು -ಬರಹಗಳಿಗೇ ಶಾಲೆಯ ಕೆಲಸ ಮುಕ್ತಾಯವಾಗದಂತೆ ಅದರ ಜೊತೆಯಲ್ಲಿ ವಿವಿಧ ಚಟುವಟಿಕೆಗಳು ನಡೆಯುವಂತೆ 'ಕಿಂಡರ್ ಗಾರ್ಟನ್ ' ಎಂಬ ಅರ್ಥದಲ್ಲಿ 'ಬಾಲವನ ' ಎಂಬ ಶಾಲೆಯನ್ನು ಪ್ರಾರಂಭಿಸಿ ಮಕ್ಕಳ ಕೂಟಗಳನ್ನು ನಡೆಸಿ ಮಕ್ಕಳ ಸಾಹಿತ್ಯದ ಸಚಿತ್ರ ಪುಸ್ತಕಗಳನ್ನು ರಚಿಸಿ ಶಿಕ್ಷಣ ಕ್ಷೇತ್ರದಲ್ಲೂ ಹೊಸ ಹೊಸ ಪ್ರಯೋಗಗಳನ್ನು ಮಾಡಿದವರು. ಜೊತೆಗೆ ಸಾಹಿತ್ಯ ಪ್ರಚಾರಕ್ಕೆ ಪೂರಕವಾಗಿ ಪ್ರಕಾಶಕರಾಗಿಯೂ ದುಡಿದರು. ಪ್ರಕಾಶನದ ಸಾಧಕ -ಬಾಧಕಗಳು ಅವರ ಆತ್ಮಕಥಾನಕಗಳ ಭಾಗವಾಗಿ ಪ್ರಕಟವಾಗಿವೆ. ಈ ಎಲ್ಲಾ ವಿಚಾರಗಳನ್ನು ಈ ನನ್ನ ಸಂಶೋಧನ ಅಧ್ಯಯನ ಗಮನಿಸುತ್ತದೆ. ಕೊನೆಯ ದಶಕಗಳಲ್ಲಿ ಪರಿಸರವನ್ನು ಕುರಿತು

ಧ್ಯಾನಿಸಿದ ರೀತಿ, ಪರಿಸರದ ಬಗೆಗಿನ ಹಾಗೂ ಪ್ರಾಣಿ ಪ್ರಪಂಚದ ವಿಸ್ಮಯಗಳು ಮತ್ತು ಅವುಗಳ ಮೇಲಿನ ಕಾಳಜಿಗಳು, ಜಾಗತಿಕ ಮಹಾಯುದ್ಧಗಳು, ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ವಿದ್ಯಮಾನಗಳು, ಅವರ ಆತ್ಮಕಥನಗಳಲ್ಲಿ ಗುರ್ತಿಸಬಹುದಾಗಿದೆ. ಸಮಾಜದ ಜೊತೆಗಿನ ಸಂಬಂಧವನ್ನು ಕಾರಂತರು ಈ ರೀತಿ ಹೇಳಿಕೊಳ್ಳುತ್ತಾರೆ.

> '' ಒಂದು ಅರ್ಥದಲ್ಲಿ ಮಾತ್ರವೇ ನನ್ನ ಬಾಳು ನನ್ನದೆಂದೆ. ಆದರೆ ವಿಶಾಲವಾದ ಅರ್ಥದಲ್ಲೂ, ಸತ್ಯವನ್ನು ನೋಡಹೋದರೂ, ಆ ಬಾಳು ಅನ್ಯರ ಬಾಳಿನೊಡನೆಯೂ ಬೆರೆತಿದೆ. ನಾನು ಸಮಾಜ ಜೀವನದ ಅಂಶವಲ್ಲವೇ ? ಅದರ ಸುಖ, ದುಃಖ ನನ್ನವಲ್ಲವೇ? ನನ್ನ ಯಾವತ್ತೂ ಜೀವಿತ ಸಮಾಜದ ಪಾಲಿನದಲ್ಲವೇ ? ''[೨]

ತಮ್ಮ ವೈಯಕ್ತಿಕವಾದ ಹಿತಾಸಕ್ತಿಗಳನ್ನು ತೊರೆದು ಸಮಾಜಮುಖಿಯಾದ ಸಮಷ್ಠಿ ಧೋರಣೆಗಳನ್ನು ಹೊಂದಿದ್ದ ವಾಸ್ತವವಾದಿಯಾದ ಕಾರಂತರ ಬದುಕು ಅನ್ಯರೊಂದಿಗೆ ಬೆರೆತ ಸಮಾಜದ ಬದುಕಾಗಿತ್ತು. ಬದುಕು ಬಂದಿರುವುದೇ ನಮ್ಮ ಪ್ರಯೋಜನಕ್ಕೆ ಹೊರತು ಅದರ ನಿರಾಕರಣೆಗೆ ಅಲ್ಲ ಎಂದು ಬದುಕಿನ ಧೋರಣೆಗಳೊಂದಿಗೆ ಸಮಾಜದಲ್ಲಿ ನಾನಾ ಕಾರ್ಯಗಳಲ್ಲಿ ತೊಡಗಿಸಿಕೊಂಡವರು ಕಾರಂತರು ಎಂಬ ವಿಚಾರಗಳನ್ನು ಮೇಲಿನ ಅವರ ಉದ್ಧರಣೆಯ ಮಾತುಗಳು ಸಮರ್ಥಿಸುತ್ತವೆ.

'ಹುಚ್ಚು ಮನಸ್ಸಿನ ಹತ್ತು ಮುಖಗಳು' ಎಂಬುದರಲ್ಲಿ ಕಾಲಕ್ರಮದ ಅನುಭವಗಳ ಸರಣಿಯಲ್ಲಿ ಬರೆದ ಕಾರಂತರು ನಂತರದಲ್ಲಿ ಅಳಿದುಳಿದ ನೆನಪುಗಳನ್ನು ಸೇರಿಸಿ ಪರಿಷ್ಕರಿಸಿದರು. ಅನಂತರದಲ್ಲಿ 'ಸ್ಮೃತಿ ಪಟಲದಿಂದ ಸಂಪುಟ -೧' ರಲ್ಲಿ ನಿಸರ್ಗ ಮತ್ತು ನಾನು, ನಾಟಕ ಮತ್ತು ನಾನು, ಶಿಕ್ಷಣ ಮತ್ತು ನಾನು ಎಂಬ ಮೂರು ವಿಭಾಗ ಕ್ರಮಗಳನ್ನು ಪ್ರಕಟಿಸಿದರು. ಸಂಪುಟ -೨ ರಲ್ಲಿ ಸಾಹಿತ್ಯ ಮತ್ತು ನಾನು, ಲಲಿತಕಲೆ ಮತ್ತು ನಾನು, ವ್ಯವಹಾರ ಮತ್ತು ನಾನು, ನಂತರದ ಸಂಪುಟ -೩ ರಲ್ಲಿ ಸಮಾಜ ಮತ್ತು ನಾನು, ಬಂಧು -ಮಿತ್ರರು ಮತ್ತು ನಾನು, ಕನಸು ಮತ್ತು ನಾನು ಎಂಬ ವಿಭಾಗ ಕ್ರಮಗಳಲ್ಲಿ ತಮ್ಮ ವಿಚಾರಗಳನ್ನು ತಿಳಿಸಿದ್ದಾರೆ. ಈ ಎಲ್ಲಾ ಆತ್ಮಕಥಾನಕಗಳಲ್ಲಿನ ಅವರ ಪ್ರಬುದ್ಧತೆಗೆ ಈ ಸಮಾಜದ ವಿಲಕ್ಷಣವಾದ ಪ್ರತಿಸ್ಪಂದನಗಳು ಯಾವ ರೀತಿಯಾದಂತಹವು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಿಕೊಳ್ಳುತ್ತ 'ಸಾಂಸ್ಕೃತಿಕ ಸಂಘರ್ಷ'ವನ್ನು ಸಂಶೋಧಿಸುವ ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಮಾಡಿದ್ದೇವೆ.

ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರದಲ್ಲಿ ಕಾರಂತರ ವಿಭಿನ್ನ ಪ್ರಕ್ರಿಯೆಗಳು ಯಾವುವು? ಸಮಾಜ ಸುಧಾರಣೆಯ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿದಾಗ ಎದುರಾಗುವ ಸಾಂಸ್ಕೃತಿಕ ಸಂಘರ್ಷಗಳು, ರಂಗಭೂಮಿ ಕ್ಷೇತ್ರದಲ್ಲಿ , ಶಿಕ್ಷಣ ಕ್ಷೇತ್ರದಲ್ಲಿ , ಸಾಹಿತ್ಯದ ಕ್ಷೇತ್ರದಲ್ಲಿ, ಪತ್ರಿಕೋದ್ಯಮದ ಕ್ಷೇತ್ರದಲ್ಲಿ ಅವರು ನಡೆಸಿದ ನವನವೋನ್ಮೇಷಶಾಲಿನಿಯ ಪ್ರಯೋಗಗಳಿಗೆ ಮುಖಾಮುಖಿಯಾದ ಬಗೆಗಳನ್ನು ಮುಖ್ಯವಾಗಿಸಿಕೊಂಡು ಒಟ್ಟಾರೆಯಾಗಿ ಕಾರಂತರ

ಆತ್ಮಕಥಾನಕಗಳ ಸಾಂಸ್ಕೃತಿಕ ಸಂಘರ್ಷಕ್ಕೆ ಪೂರಕ ಪ್ರೇರಕವಾದ ಹಲವಾರು ರೀತಿಯ ಸಹಾಯಕ ಸಾಮಗ್ರಿಗಳನ್ನು ಪರಿಶೀಲಿಸಿ ಅಧ್ಯಯನ ಮಾಡುವುದು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿ ಸಾಂಸ್ಕೃತಿಕ ಸಂಘರ್ಷ, ಸೃಜನಶೀಲ ವ್ಯಕ್ತಿತ್ವವೊಂದರ ಅನಾವರಣವನ್ನು ಗುರ್ತಿಸಬಹುದಾಗಿದೆ. ಇದರ ವಿವರಣೆಗೆ ಟಿ.ಪಿ.ಅಶೋಕರ ಈ ಮಾತುಗಳನ್ನು ಗಮನಿಸಬಹುದಾಗಿದೆ.

> ''ಒಂದು ಆತ್ಮ ಚರಿತ್ರೆಯಾಗಿ, ಗದ್ಯ ಬರವಣಿಗೆಯಾಗಿ 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ನಮ್ಮ ಸಾಹಿತ್ಯ ಸಂದರ್ಭದಲ್ಲೇ ಒಂದು ವಿಶಿಷ್ಟ ಕೃತಿಯಾಗಿದೆ. ಪ್ರಜ್ಞೆ ಮತ್ತು ಪರಿಸರದ ತಿಕ್ಕಾಟದಲ್ಲೇ ವ್ಯಕ್ತಿತ್ವ ಬೆಳೆಯುತ್ತದೆ, ಅರಳುತ್ತದೆ. ಪ್ರಜ್ಞೆ ಪರಿಸರದಿಂದ ರೂಪಗೊಳ್ಳುವುದಷ್ಟೇ ಅಲ್ಲ ತಾನೂ ಪರಿಸರವನ್ನು ರೂಪಿಸಿರುತ್ತದೆ. ಈ ಮಾತು ಕಾರಂತರಿಗೆ ತುಂಬಾ ಚೆನ್ನಾಗಿ ಅನ್ವಯಿಸುತ್ತದೆ. ಹಾಗಾಗಿ 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಕೇವಲ ಹೇಳಿಕೆಗಳಾಗದೆ, ಇಲ್ಲವೆ ಅಂಕಿ ಅಂಶಗಳಾಗದೆ ವ್ಯಕ್ತಿತ್ವವೊಂದು ರೂಪಗೊಳ್ಳುವ ಸೃಜನಶೀಲ ಪ್ರಕ್ರಿಯೆಯೊಂದನ್ನೇ ನಮ್ಮ ಮುಂದೆ ತೆರೆದಿಡುತ್ತದೆ. ಆತ್ಮ ಚರಿತ್ರೆಯೊಂದು ವ್ಯಕ್ತಿಯೊಬ್ಬನ ವೈಯಕ್ತಿಕ ಬೆಳವಣಿಗೆಯನ್ನು ಕುರಿತಂತೆ ಸ್ವನಿಷ್ಠ ಬರವಣಿಗೆಯಾದರೂ ಅದನ್ನು ಮೀರಿದಾಗಲೇ ಅದಕ್ಕೆ ಹೆಚ್ಚಿನ ಮಹತ್ವ ಬರುವುದು. 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಇದಕ್ಕೆ ಒಂದು ಒಳ್ಳೆಯ ಉದಾಹರಣೆ. ಈ ಕೃತಿಯ ಮೊದಲ ಅಧ್ಯಾಯದಿಂದ 'ಪ್ರಸ್ತಾವನೆ 'ಯಲ್ಲಿ ಈ ಬರವಣಿಗೆಯನ್ನು ಕುರಿತಂತೆಯೇ ಕಾರಂತರು ಮಾಡಿರುವ ಹೇಳಿಕೆಗಳು ವ್ಯಕ್ತಿ -ಸಮಾಜ ಸಂಬಂಧಗಳ ಬಗ್ಗೆ ಒಟ್ಟಾರೆ ಬರವಣಿಗೆಯ ಉದ್ದೇಶಗಳ ಬಗ್ಗೆ ಕೆಲ ಹೊಸ ಒಳನೋಟಗಳನ್ನು ಕೊಡುವಂತಿವೆ. 'ವಿಶ್ವದಲ್ಲಿ ಜೀವಿಸುತ್ತಿರುವ ಯಾವನೊಬ್ಬ ವ್ಯಕ್ತಿಗೂ, ಒಬ್ಬನೇ ಗುರು ಇಲ್ಲದೇ ಹೋದರೂ ಅವನ ಶಿಕ್ಷಣ, ಅನುಭವಗಳೆಲ್ಲವೂ ಆ ವಿಶ್ವವಿಂದಲೇ ಬಂದಿರುತ್ತವೆ. ನಿಸರ್ಗದ ಪ್ರತಿಯೊಂದು ಶಿಕ್ಷಣವೂ, ಬರಹಗಾರನ ಮನೋವೃತ್ತಿಯನ್ನು ಸದಾ ರೂಪಿಸುತ್ತಲೇ ಇರುತ್ತದೆ. ಇತರರೂ ಆ ನಿಯಮಕ್ಕೆ ಹೊರಗಾಗಿಲ್ಲ, ಹುಟ್ಟಿನಿಂದಲೇ ತೊಡಗುವ ಈ ಶಿಕ್ಷಣವು, ಅವನ ಬಾಳಿನ ಕೊನೆಗೇನೇ ಮುಗಿಯುತ್ತದೆ. ಈ ಎರಡರ ನಡುವಣ ದೀರ್ಘ ಇಲ್ಲವೆ ಅಲ್ಪಾವಧಿಗಳಲ್ಲಿ ಆತ ತನ್ನ ಲೇಖನ ದೀಕ್ಷೆಯನ್ನು ಪಡೆಯುತ್ತಾನೆ. ಇದು ಕಾರಂತರ ನಂಬಿಕೆ. ಆದ್ದರಿಂದಲೆ ಅವರಿಗೆ ತಮ್ಮ ಆತ್ಮವೃತ್ತ ಪರಿಪೂರ್ಣವೆಂಬ ಭ್ರಮೆಯಿಲ್ಲ. 'ಈ ವಿಶ್ವವೇ ಪರಿಪೂರ್ಣತೆಗಾಗಿ ಹೆಣಗುತ್ತಿದೆಯೆಂದು ತಿಳಿದ ನಾನು ಸರ್ವಜ್ಞ ಪಟ್ಟವನ್ನು ವಹಿಸಿಕೊಳ್ಳಲಾರೆ ' ಎನ್ನುತ್ತಾರೆ ''[೩]

ಪ್ರಜ್ಞೆ ಮತ್ತು ಪರಿಸರಗಳ ಸಂಘರ್ಷದಲ್ಲಿ ಕಾರಂತರ ವ್ಯಕ್ತಿತ್ವ ರೂಪಗೊಂಡಿರುವುದು. ಅವರು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡದ್ದು ಅಷ್ಟೇ ಅಲ್ಲದೆ ಸುತ್ತಲಿನ ಪರಿಸರವನ್ನು ಅವರ ಗ್ರಹಿಕೆಯಂತೆ ನಿರ್ಮಿಸಲು ಪ್ರಯತ್ನಪಟ್ಟವರು. ಅದಕ್ಕೆ ಪೂರಕವಾದುದು ಅಂದಿನ ಸಮಾಜ, ಅಂದಿನ ಸಾಂಸ್ಕೃತಿಕತೆ, ಸೃಜನಶೀಲವಾದ ಪ್ರಕ್ರಿಯೆಗಳ ಮೂಲಕ ಇವೆಲ್ಲವುಗಳಿಗೂ

ಮುಖಾಮುಖಿಯಾಗುತ್ತಲೇ ಬಂದವರು ಕಾರಂತರು. ಆದುದರಿಂದ ಅವರ 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಆತ್ಮಕಥನ ಕೇವಲ ವೈಯಕ್ತಿಕ ವಿಚಾರಗಳ ದಾಖಲೆಯಾಗಿರದೆ ಅದನ್ನು ಮೀರಿದ ಅಂದಿನ ಸಮಾಜದ ಅನೇಕ ವಿಚಾರಗಳ ದಾಖಲೆಯಾಗಿದೆ ಎಂಬುದಾಗಿ ಕಾರಂತರ ಆತ್ಮಕಥಾನಕದ ಮಹತ್ವವನ್ನು ಮೇಲೆ ಉದ್ಧರಿಸಿರುವ ಟಿ.ಪಿ. ಅಶೋಕರ ಮಾತುಗಳು ಸಮರ್ಥಿಸುತ್ತವೆ.

'ಹೋರಾಟ ' ಅನ್ನುವುದೇ ಸಂಘರ್ಷ. ಕಾರಂತರು ಜೀವನ ಪೂರ್ತಿ ಬದುಕಿನ ಪ್ರಯೋಗಶೀಲತೆ ಮತ್ತು ಹೋರಾಟದಲ್ಲಿ ತೊಡಗಿದವರು. ಆ ಹೋರಾಟ (ಸಂಘರ್ಷ) ಸಾಂಸ್ಕೃತಿಕವಾದುದೂ ಆದುದರಿಂದ ಆ ನೆಲೆಗಳ ಹಿನ್ನೆಲೆಯಲ್ಲಿ 'ಸಾಂಸ್ಕೃತಿಕ ಸಂಘರ್ಷ ' ಶೀರ್ಷಿಕೆಯಡಿಯಲ್ಲಿ ಅವರ ಆತ್ಮಕಥಾನಕಗಳನ್ನು ಪ್ರಧಾನವಾಗಿಸಿಕೊಂಡು ನನ್ನ ಸಂಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ.

ಸಾಹಿತಿಗಳು, ಹೋರಾಟಗಾರರು, ರಾಜಕಾರಣಿಗಳು, ಮಠಾಧೀಶರು, ಸಾಮಾನ್ಯ ಶಿಕ್ಷಕರು ಹೀಗೆ ಸಮಾಜದ ವಿಭಿನ್ನ ವರ್ಗದವರು ಮತ್ತು ಸಮಾಜದ ವಿಭಿನ್ನ ಮನೋ ಧರ್ಮದವರು ಬರೆದಿರುವ ಆತ್ಮ ಕಥಾನಕಗಳಾಗಲಿ ಅಥವಾ ಕನ್ನಡದ ಸಂದರ್ಭದಲ್ಲಿ ಪ್ರಕಟಣೆಗೊಂಡಿರುವ ಒಟ್ಟು ಆತ್ಮ ಕಥಾಕಗಳನ್ನು ಕುರಿತು ಈ ಅಧ್ಯಯನದಲ್ಲಿ ಕಾಲದ ಮಿತಿಯಿಂದ ಸಾಧ್ಯವಿಲ್ಲವಾದ್ದರಿಂದ ಇಲ್ಲಿ ಶಿವರಾಮ ಕಾರಂತರ ಆತ್ಮ ಕಥಾನಕಗಳನ್ನು ಮಾತ್ರ ನನ್ನ ಅಧ್ಯಯನಕ್ಕೆ ಗುರಿಪಡಿಸಿಕೊಂಡಿದ್ದೇನೆ.

---

<u>ಅಡಿ ಟಿಪ್ಪಣಿಗಳು :</u>

೧. ಶಿವರಾಮ ಕಾರಂತ : 'ಹುಚ್ಚು ಮನಸ್ಸಿನ ಹತ್ತು ಮುಖಗಳು ' , ಎಸ್.ಬಿ.ಎಸ್. ಪಬ್ಲಿಷರ್ಸ್ , ಬೆಂಗಳೂರು, ೨೦೦೭, ಪುಟ -೦೫.

೨. ಅದೇ ----- '' ------'' ಪುಟ -೦೨.

೩. ಅಶೋಕ ಟಿ.ಪಿ. : 'ಪುಸ್ತಕ ಪ್ರೀತಿ ', ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೧೯೯೩, ಪುಟ -೧೭.

## ಅಧ್ಯಾಯ - ೨

# ಕಾರಂತರ ರಾಜಕೀಯ ನೆಲೆಗಳ ಸಂಘರ್ಷಗಳು

೨.೧. ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಕಾರಂತರು
೨.೨. ಸ್ವಾತಂತ್ರ್ಯೋತ್ತರದ ಸಂದರ್ಭದಲ್ಲಿ ಕಾರಂತರು

## ೨.೧. ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಕಾರಂತರು

" ನಾನು ನನ್ನ ಸಹಪಾಠಿಗಳೂ ಪರತಂತ್ರದಿಂದ ಸ್ವಾತಂತ್ಯವನ್ನು ಕಾಂಡವರು. ಭಾರತವು ಪರತಂತ್ರವಾಗಿದ್ದಾಗ, ನಮ್ಮ ಪ್ರತಿಯೊಂದು ಕೊರತೆಗೂ ಬ್ರಿಟೀಷರನ್ನೇ ದೂರುತ್ತಿದ್ದೆವು. ಇದಕ್ಕೆ ಪ್ರತಿಯಾಗಿ, ನಮ್ಮ ಮನಸ್ಸಿನಲ್ಲಿ -ಭಾರತೀಯರದಾದ ಮತ, ಧರ್ಮ, ಸಂಸ್ಕೃತಿ, ವಿದ್ಯೆ ಯಾವುದೇ ಇದ್ದರೂ ಸರ್ವ ಶ್ರೇಷ್ಠ ಎಂಬ ಭಾವನೆ ಬೇರೂರಿತ್ತು. "

-ಶಿವರಾಮ ಕಾರಂತ

## ೨.೧. ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಕಾರಂತರು

ಬ್ರಿಟೀಷರ ಆಳ್ವಿಕೆಗೆ ಒಳಗಾಗಿದ್ದ ಸ್ವಾತಂತ್ರ್ಯ ಪೂರ್ವ ಭಾರತದ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನವು ಅತ್ಯಂತ ಸಂಕೀರ್ಣವಾದಂತಹ ಶತಮಾನವಾಗಿತ್ತು. ಬ್ರಿಟಿಷ್ ವಸಾಹತುಶಾಹಿಗೆ ಒಳಗಾಗಿದ್ದ ಭಾರತ ವಿಭಿನ್ನ ಭಾಷೆ , ಸಂಸ್ಕೃತಿಗಳಿಂದ ಕೂಡಿದ್ದರೂ ಏಕ ರಾಷ್ಟ್ರವೆಂಬ ಕಲ್ಪನೆಯ ಮುಖೇನ ಅದರ ಬಂಧನದಿಂದ ಬಿಡುಗಡೆಯನ್ನು ಪಡೆಯಲು ಹಲವಾರು ರೀತಿಯ ಹೋರಾಟಗಳನ್ನು ಪ್ರಾರಂಭ ಮಾಡಿತು. ಭೇದ -ಭಾವನೆಗಳಿಲ್ಲದೆ ಸ್ವಾತಂತ್ರ್ಯ ಹೋರಾಟಕ್ಕೆ ಜನತೆ ಸಿದ್ಧರಾದರು. ಈ ರೀತಿಯದಾದಂತಹ ಹೋರಾಟಕ್ಕೆ ಅಗತ್ಯವಾದ ಸತ್ಯಾಗ್ರಹ, ಅಹಿಂಸಾತ್ಮಕವಾದ ಪ್ರತಿರೋಧವನ್ನು ಗಾಂಧೀಜಿಯವರು ಕ್ರಿಯಾಶೀಲಗೊಳಿಸುವುದರ ಮೂಲಕ ಸ್ವಾತಂತ್ರ್ಯ ಚಳುವಳಿಗೆ ತೊಡಗಿದರು. ತಮ್ಮ ವಿಚಾರಧಾರೆಗಳ ಮೂಲಕ ಜನತೆಯಲ್ಲಿ ಹೊಸದಾದಂತಹ ಎಚ್ಚರವನ್ನು ಮೂಡಿಸಿದರು. ಅಂತಹ ಒಂದು ಎಚ್ಚರ ಜನತೆಯಲ್ಲಿ ರಾಷ್ಟ್ರಾಭಿಮಾನದ ಉತ್ಸಾಹದ ಅಲೆಯನ್ನು ಉಂಟು ಮಾಡಿತು. ಭಾರತ ದೇಶದ ಜನತೆ ಸಮಗ್ರ ದೇಶದ ಪುನರಚನೆಗಾಗಿ ನಿರಂತರವಾದ ಸಂಘರ್ಷಗಳನ್ನು ಮಾಡುತ್ತಲೇ ಬಂದರು.

ಸಂಘರ್ಷದ ಹಾದಿಗಳು ಹಲವಾರು ರೀತಿಯ ಪ್ರತಿರೋಧಗಳ ಮೂಲಕ ವ್ಯಕ್ತವಾದವು. ರಾಜಕೀಯವಾಗಿ ವ್ಯಕ್ತವಾದ ಪ್ರತಿರೋಧಗಳು ಅವುಗಳಲ್ಲಿ ಬಹಳ ಪ್ರಮುಖವಾದವು. ಆ ಕಾಲಮಾನದ ಚಾರಿತ್ರಿಕವಾದ ಒತ್ತಡದಿಂದಾಗಿ ಅಥವಾ ಅನಿವಾರ್ಯತೆಯಿಂದಾಗಿ 'ಭಾರತೀಯತೆ'ಯ ಪರಿಕಲ್ಪನೆಯೊಂದು ರೂಪಗೊಂಡಿತ್ತು. ಅಂತಹ ಸಂದರ್ಭದಲ್ಲಿ ರಾಷ್ಟ್ರಿಯ ಸೇವಾ ಮನೋಭಾವದ ಶಿವರಾಮ ಕಾರಂತರು ಅನ್ಯ ಸಂಸ್ಕೃತಿಗೆ ಮುಖಾಮುಖಿಯಾಗುವ ಮುಖೇನ ಸಾಂಸ್ಕೃತಿಕ ಸಂಘರ್ಷಕ್ಕಿಳಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರಭಕ್ತಿಯನ್ನು ಉಸಿರಾಗಿಸಿಕೊಂಡು ಸ್ವದೇಶಿ, ಸ್ವರಾಜ್ಯ ಆಂದೋಲನಗಳಿಗೆ ತಮ್ಮನ್ನು ತೊಡಗಿಸಿಕೊಂಡವರಲ್ಲಿ ಕಾರಂತರೂ ಒಬ್ಬರು. ೧೯೨೧, ಸೆಪ್ಟೆಂಬರ್ ತಿಂಗಳಲ್ಲಿ ನಾಗಪುರದಲ್ಲಿ ನಡೆದ ಕಾಂಗ್ರೆಸ್ ವಿಶೇಷ ಅಧಿವೇಶನ, ಅಕ್ಟೋಬರ್ ಸುಮಾರಿಗೆ ತಿಲಕರು ತೀರಿಕೊಂಡ ವಾರ್ತೆ, ಗಾಂಧೀಜಿಯವರ ಅಸಹಕಾರ ಸಂದೇಶ, ಸ್ವದೇಶಿ, ಸ್ವರಾಜ್ಯ ಆಂದೋಲನಗಳು ಕಾರಂತರ ಮನಸ್ಸನ್ನು ಸೆಳೆಯತೊಡಗಿದವು. ಇಂತಹ ಸಂದರ್ಭದಲ್ಲಿ ೧೯೨೨ ರ

ಫೆಬ್ರವರಿಯಲ್ಲಿ ಕಾಲೇಜನ್ನು ತೊರೆದು ಗಾಂಧೀಜಿಯವರ ಆದರ್ಶಗಳಿಗೆ ಪ್ರಭಾವಿತರಾಗಿ ರಾಷ್ಟ್ರೀಯ ಅಸಹಕಾರ ಚಳುವಳಿಯಲ್ಲಿ ಕ್ರಿಯಾಶೀಲರಾದರು. ಹಲವಾರು ರಾಷ್ಟ್ರೀಯ ಹೋರಾಟಗಾರರ ಉಪನ್ಯಾಸಗಳಿಂದ ಮತ್ತಷ್ಟು ಆಕರ್ಷಿತರಾಗಿ ಸ್ವದೇಶಿ ಸತ್ಯಾಗ್ರಹ, ಖಾದಿ, ಅಸಹಕಾರ, ಉಪ್ಪಿನ ಸುಂಕ, ವಿದೇಶಿಯ ಬಟ್ಟೆಗಳ ಬಹಿಷ್ಕಾರ, ವಿದೇಶಿ ಸಕ್ಕರೆಯ ಬಹಿಷ್ಕಾರ ಮುಂತಾದ ಅಂದಿನ ರಾಷ್ಟ್ರೀಯ ಚಳುವಳಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡರು. ಅದನ್ನು ಕಾರಂತರ ಈ ಮುಂದಿನ ಮಾತುಗಳಿಂದ ಪುಷ್ಟೀಕರಿಸಬಹುದು.

> '' ನಮ್ಮ ಪಾಲಿಗೆ ಈ ಕಾಲದ ದೊಡ್ಡ ಘಟನೆಯೆಂದರೆ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತು ಮಂಗಳೂರಿನಲ್ಲಿ ಜರುಗಿದುದು. ಶೇಡಿಗುಡ್ಡೆಯ ಜೈನ ಕಂಪೌಂಡಿನಲ್ಲಿ ಅದಕ್ಕಾಗಿಯೇ ಚಪ್ಪರ ಹಾಕಿದ್ದರು. ಕೋಕಿಲವಾಣಿ ಸರೋಜಿನಿ ದೇವಿಯು ಅದರ ಅಧ್ಯಕ್ಷೆಯಾಗಿದ್ದರು. ಇನ್ನು ಕರ್ನಾಟಕದ ಸಿಂಹಗಳಾದ ಗಂಗಾಧರರಾವ್ ದೇಶಪಾಂಡೆ, ಕೌಜಲಗಿ ಶ್ರೀನಿವಾಸರಾವ್ ಮೊದಲಾದವರು ಬಂದಿದ್ದರು. ಅವರ ಆರ್ಭಟೆಯ ಉಪನ್ಯಾಸಗಳನ್ನು ಕೇಳಿ ರಾಷ್ಟ್ರಭಕ್ತಿಯ ಸ್ಫೂರ್ತಿ ನಮ್ಮ ಪ್ರತಿಯೊಂದು ರಕ್ತನಾಳದಲ್ಲಿಯೂ ತುಂಬಿಹರಿಯಿತು. ಆಗಲೇನೆ ನಮ್ಮ ಜತೆಗೆ ಹೊಲೆಯರು ಮೊದಲ ಬಾರಿಗೆ ಬಂದು ಕುಳಿತಿದ್ದರು. ಅಂದಿನಿಂದ ಮಂಗಳೂರು ಮೈದಾನದಲ್ಲಿ ನಿತ್ಯವೂ ಕಾಂಗ್ರೇಸ್ ಸಭೆಗಳೇ ! ಆ ಕಾಲದಲ್ಲಿ ಮಂಗಳೂರಿನ ಒಬ್ಬ ಮಹಾವೀರ ಬಹಳ ವಾಗ್ಮಿಗಳೆಂದು ಹೆಸರಾಗಿದ್ದರು. ಬ್ರಿಟೀಷರನ್ನು ಓಡಿಸುವ ಸಲುವಾಗಿ ಅವರ ಉಪನ್ಯಾಸಗಳಲ್ಲಿ ಸೂಳೆಯ ಮಕ್ಕಳು ಮತ್ತು ಬೋಳೀ ಮಕ್ಕಳುಗಳ ಜಪಸರವನ್ನೇ ತೂಗಿಸಿಬಿಡುತ್ತಿದ್ದರು. ಒಮ್ಮೆ ಅವರು ನಿಂತಲ್ಲೇ ತಮ್ಮ ಮೈಮೇಲಿನ ಮಲ್ ಅಂಗಿಯನ್ನು ಹರಿದು, ಎಸೆದು, ಖಾದಿ ಹಾಕಿಕೊಂಡರು. 'ಹಿಂದೂಸ್ಥಾನದ ಮೂವತ್ತಮೂರು ಕೋಟಿ ಜನರು ಸಿಂಬಳ ತೆಗೆದು ಸಿಡಿದರೆ, ಅದರ ಪ್ರವಾಹದಲ್ಲಿ ಈ ಬ್ರಿಟೀಷರು ತೇಲಿ ಹೋದಾರು ' ಎಂದು ಬೆದರಿಕೆಯನ್ನು ಹಾಕಿದ್ದರು''[1]

ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಗಳು, ಅವುಗಳ ತೀವ್ರತೆ, ಕಾರಂತರಂತೆ ಅಂದಿನ ಭಾರತೀಯರ ಮೇಲೆ ಬೀರಿದ ಪ್ರಭಾವಗಳನ್ನೇ ಈ ಮೇಲಿನ ಮಾತುಗಳಲ್ಲಿ ಗುರುತಿಸಬಹುದಾಗಿದೆ.

ಕುಂದಾಪುರವನ್ನು ಕಾರ್ಯ ಕ್ಷೇತ್ರವಾಗಿ ಆರಿಸಿಕೊಂಡು ಕಾರಂತರು ಗಾಂಧೀಜಿಯವರ 'ಯಂಗ್ ಇಂಡಿಯಾ' ಪತ್ರಿಕೆಯ ಪ್ರಭಾವಕ್ಕೊಳಗಾದರು. ವಿದೇಶಿಯ ಅಂಗಿ ಗುಂಡಿಯ ಸಂಪರ್ಕವಿಲ್ಲದೆ ಖಾದಿಯಿಂದ ಮಾಡಿದ ಕಸೆ ಅಂಗಿಯನ್ನು ಹಾಕಿಕೊಂಡು, ತಲೆಗೆ ಗಾಂಧಿ ಟೋಪಿಯನ್ನು ತೊಟ್ಟ ಅವರ ಉಡುಗೆಯಲ್ಲೂ ಬದಲಾವಣೆಗಳನ್ನು ಕಾಣುವಂತಾಯಿತು. ಗಾಂಧೀಜಿಯವರು 'ಹಿಂದ್ ಸ್ವರಾಜ್ ' ಎಂಬ ಗ್ರಂಥದಲ್ಲಿ ಬರೆದಿರುವ ಮಾತುಗಳನ್ನು

ವೇದವಾಕ್ಯದಂತೆ ತಿಳಿದು ಅದರ ಐಹಿಕ ಬಾಳ್ವೆಯ ತಿರಸ್ಕಾರ, ಬ್ರಹ್ಮಚರ್ಯೆ ಮೊದಲಾದ ಆದರ್ಶಗಳನ್ನು ಒಂದೇ ಗುಟಕೆಗೆ ಕುಡಿದು ಜೀರ್ಣಿಸಿಕೊಂಡವರಂತೆ ದೊಡ್ಡ -ದೊಡ್ಡ ಕನಸನ್ನು ಕಟ್ಟಿಕೊಂಡು ಬಾಳಲು ತೊಡಗಿದವರು ಕಾರಂತರು. ಅದಕ್ಕಾಗಿ ತಮ್ಮದೇ ರೀತಿಯ ದೇಶಸೇವೆಯ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡು ಭಿನ್ನ ಸಂಸ್ಕೃತಿಗೆ ಮುಖಾಮುಖಿಯಾದರು.

" ನಾವು ಭೇಟಿಯಾಗುವ ಹೊತ್ತಿಗಾಗಲೇ ಕಾರಂತರು ತಮ್ಮ ತವರಾದ ಕೋಟ ಮಾತ್ರವಲ್ಲದೆ ವಿದ್ಯಾಭ್ಯಾಸವನ್ನು ಬಿಟ್ಟು ಗಾಂಧೀಜಿಯವರು ಮುಂದಿಟ್ಟ ರಚನಾತ್ಮಕ ಕಾರ್ಯಗಳಿಗೆ ಜೀವನವನ್ನು ಅರ್ಪಣೆ ಮಾಡಿಯಾಗಿತ್ತು. ತಮ್ಮ ವಿವಾಹದ ವಿಷಯವನ್ನು ಕುರಿತು ತಂದೆ -ತಾಯಿಗಳು ಯಾವ ಯೋಚನೆಯನ್ನು ಮಾಡಬೇಕಾಗಿದ್ದಿಲ್ಲವೆಂದೂ, ಅವರ ಆಸ್ತಿಯಲ್ಲಿ ಯಾವ ಪಾಲನ್ನು ತಾನೂ ಬೇಡೆನೆಂದೂ ಅವರಿಗೆ ತಿಳಿಸಿ ಬಹುಶಃ ಅವರನ್ನು ಬೀಳ್ಕೊಂಡಾಗಿತ್ತು. ತಾನು ಹುಟ್ಟಿದ ಶ್ರೀಮಂತ ಕುಟುಂಬದಿಂದ ಏನನ್ನು ಆಶಿಸದೆ, ನಿರೀಕ್ಷಿಸದೆ, ಉಟ್ಟ ಬಟ್ಟೆಯಲ್ಲಿ ಬಡತನವನ್ನು ಸ್ವೀಕರಿಸಿ, ದೇಶಸೇವೆಗೆ ಧುಮುಕಿ ಆಗಿತ್ತು. ಯಾವ ಕ್ರಿಯಾ ರಂಗಕ್ಕೂ ಸ್ವಯಂ ಸೇವಕರು ಬೇಕಲ್ಲವೇ ? ಅವರು ಮದುವೆಗೆ ಆಸ್ತಿಗೆ ಕಾದು ಕುಳಿತರೆ ಹೇಗೆ ? ತಾವು ವರಿಸಿದ ಕೆಲಸಕ್ಕೆ ನಿರಾಡಂಬರವಾದ ಒಂದು ಮೀಸಲು ಬದುಕನ್ನು ಬದುಕಲು ಅವರು ನಿಷ್ಠೆ ವಹಿಸಿದ್ದರು. ಕಾರಂತರ ದೇಶ ಸೇವೆಯೂ ಸರ್ವಸಾಮಾನ್ಯವಾದುದಾಗಿರಲಿಲ್ಲ. ಯಾವ ಸದ್ದುಗದ್ದಲವನ್ನೂ ಮಾಡದೆ ಎಲ್ಲಾದರೂ ಒಂದು ಮೂಲೆಯಲ್ಲಿ ಉಪಯುಕ್ತವಾದ ಯಾವುದಾದರೂ ಒಂದು ಕೆಲಸವನ್ನು ಮನಃಪೂರ್ತ ಮಾಡುವುದು, ಇತರರಿಂದ ಮಾಡಿಸುವುದು -ಇಷ್ಟೇ ತಮ್ಮ ಅನುಭವದ ಪರಿಣಾಮವಾಗಿ ತೀರ್ಮಾನಿಸಿ ಅವರು ದೇಶ ಸೇವೆಗೆ ಕಟ್ಟಿದ ಅರ್ಥ "[೨]

ರಾಷ್ಟ್ರಸೇವೆಗಾಗಿ ವೈಯಕ್ತಿಕ ಹಿತಾಸಕ್ತಿಗಳನ್ನೇ, ಕುಟುಂಬವನ್ನು, ತನ್ನ ಪಾಲಿನ ಆಸ್ತಿಯನ್ನು ಬಿಟ್ಟು ಸುಧಾರಣಾ ಚಟುವಟಿಕೆಯಲ್ಲಿ ಕ್ರಿಯಾಶೀಲರಾದರು. ದೇಶಸೇವೆಗೆ ಸ್ವಯಂಸೇವಕನಾಗಿ ತನ್ನದೇ ಆದ ಕಲ್ಪನೆಗಳನ್ನು ಕಟ್ಟಿಕೊಂಡು ಕಾರ್ಯರಂಗದಲ್ಲಿ ತೊಡಗಿದವರು. ಬದುಕಿನ ಸವಾಲುಗಳನ್ನು ಧೈರ್ಯದಿಂದ ಸ್ವೀಕರಿಸಿ, ಅವುಗಳ ಮೂಲಕ ಅಪಾರವಾದ ಅನುಭವಗಳನ್ನು ಪಡೆದು ಯಾವುದಾದರೊಂದು ಕಾರ್ಯದಲ್ಲಿ ಅವರು ತೊಡಗಿಕೊಳ್ಳುತ್ತಿದ್ದರು ಎಂಬುದನ್ನು ಅವರ ಆಪ್ತರಲ್ಲಿ ಒಬ್ಬರಾಗಿದ್ದ ವಿ.ಸೀತಾರಾಮಯ್ಯ ಅವರು ಮೇಲಿನಂತೆ ಅಭಿಪ್ರಾಯ ಪಟ್ಟಿರುವುದನ್ನು ಕಾಣಬಹುದಾಗಿದೆ. ಇಂಥ ಸಂಗತಿಗಳನ್ನು ಅವರ ಆತ್ಮಕಥೆಯು ಪುಷ್ಠೀಕರಿಸುತ್ತದೆ.

ನಿಧಿ ಸಂಗ್ರಹಕ್ಕಾಗಿ :

ಗಾಂಧೀಜಿಯವರು ತಿಲಕರ ಸ್ವರಾಜ್ಯ ನಿಧಿಗೆ ಒಂದು ಕೋಟಿ ರೂಪಾಯಿ ಕೊಡಿಸುವ ಪಣ ತೊಟ್ಟಿದ್ದರು. ಅಂತಹ ಸಂದರ್ಭದಲ್ಲಿ ದೇಶದಾದ್ಯಂತ ಅವರಿಗೆ ಈ ಕಾರ್ಯದಲ್ಲಿ ನೆರವಾದರು.

ಗಾಂಧಿಯ ಅಭಿಮಾನಿಯಾದ, ಉತ್ಸುಕರಾಗಿದ್ದಂತಹ ಕಾರಂತರೂ ಇದರಲ್ಲಿ ತೊಡಗಿಕೊಂಡು ಅಲೆದಾಡುತ್ತ ತಮ್ಮ ಕೈಲಿ ಸಾಧ್ಯವಾದಷ್ಟು ದುಡಿದಿದ್ದನ್ನು ಗಮನಿಸಿದರೆ ಅವರ ದೇಶಾಭಿಮಾನದ ಜೊತೆಗೆ ತಾಳ್ಮೆ, ಕ್ರಿಯಾಶೀಲತೆಯನ್ನು ಗಮನಿಸಬಹುದಾಗಿದೆ. ಈ ನಿಧಿ ಸಂಗ್ರಹಕ್ಕಾಗಿ ಅನೇಕ ದಿನಗಳು ಕಾಲ್ನಡಿಗೆಯಲ್ಲಿ ಸುತ್ತಾಡಿದ ಕಾರಂತರಿಗೆ ಮನೆಯಲ್ಲಿ ಬೇನೆಯಿಂದ ಮಲಗಿದ್ದ ತಂದೆಗಿಂತ ದೇಶಸೇವೆ ಮುಖ್ಯವಾಗಿದ್ದ ವಿಚಾರಗಳನ್ನೆ ಮನಗಾಣಬಹುದಾಗಿದೆ. ಈ ಎಲ್ಲಾ ಅನುಭವಗಳೂ ಮುಂದಿನ ಅವರ ಸಮಾಜದ ಜೊತೆಗಿನ ಸಾಂಸ್ಕೃತಿಕ ಬದುಕಿಗೆ ಮುಖಾಮುಖಿಯಾಗಲು ಸಹಕಾರಿಯಾದ ತಾಳ್ಮೆಯನ್ನು, ಕಾರ್ಯದಕ್ಷತೆಯ ಕ್ರಿಯಾಶೀಲತೆಯನ್ನು ಒದಗಿಸಿಕೊಟ್ಟವು. ಸಾಮಾಜಿಕ ಪರಿವರ್ತನೆಯ ಸಮಷ್ಠಿ ಪ್ರಜ್ಞೆಯನ್ನು ಹೊಂದಿದ್ದಂತಹ ಅನೇಕರಲ್ಲಿ ವೈಯಕ್ತಿಕ ಕುಟುಂಬಕ್ಕಿಂತ ಸಾಮಾಜಿಕ ಹಿತಾಸಕ್ತಿಯನ್ನು ಮುಖ್ಯವಾಗಿಸಿಕೊಂಡದ್ದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ ಸಿದ್ಧಾರ್ಥ, ಗಾಂಧೀಜಿ ಮುಂತಾದವರು. ಕುವೆಂಪುರವರ ನೆನಪಿನ ದೋಣಿಯಲ್ಲೂ ಸಹ ಈ ಅಂಶವನ್ನು ಗಮನಿಸಬಹುದಾಗಿದೆ.

### ಖಾದಿ ಉತ್ಪನ್ನ :

ಸ್ವಾತಂತ್ರ್ಯ ಪೂರ್ವದಲ್ಲಿ ಸ್ವದೇಶಿ ಪ್ರೇಮಕ್ಕೊಳಗಾದ ಕಾರಂತರಿಗೆ ಖಾದಿ ಪ್ರಸಾರವೂ ಮುಖ್ಯ ಉದ್ಯೋಗವಾಗಿತ್ತು. ರಾಟಿ ಮಾಡಿಸಿ ಅವುಗಳನ್ನು ಹಂಚುತ್ತಿದ್ದರು. ಸ್ವತಃ ಮರಗೆಲಸದಿಂದ ರಾಟಿ ಮಾಡಿದ್ದೂ ಉಂಟು. ಕುಂದಾಪುರದಲ್ಲಿ ನೇಯುವವರಿಗೆ ಹತ್ತಿ ಒದಗಿಸುವುದೂ ಸಹ ಅವರ ಕೆಲಸವಾಗಿತ್ತು. ಇಲ್ಲೂ ಹೊಸ ಹೊಸ ಪ್ರಯೋಗಗಳನ್ನು ಮಾಡತೊಡಗಿದರು. ಮರದಿಂದ ಅಚ್ಚುಗಳನ್ನು ಮಾಡಿಸಿ ಮುದ್ರಿಸತೊಡಗಿದರು. ಪಿ.ಸಿ.ರೈಯವರ 'ದೇಶೀ ರಂಗ್ ' ಪುಸ್ತಕವನ್ನು ತರಿಸಿಕೊಂಡು ಸ್ವದೇಶಿಯ ಬಣ್ಣವನ್ನು ಹಾಕಲು ಕಲಿತರು. ಬರಬರುತ್ತ ನೇಯ್ಗೆಯ ಕೆಲಸ ತೊಡಕಾಗಿ ಬರಲು ನೂಲನ್ನು ಮಂಗಳೂರಿಗೆ ಕಳುಹಿಸಿದರು. ಆದರೆ ಅಲ್ಲಿ ಅದು ಅಪ್ರಯೋಜಕವೆಂದು ಆರು ತಿಂಗಳ ನಂತರ ವಾಪಸ್ಸು ಬರಲು ಕೊನೆಗೆ ಯಾರೋ ಮಗ್ಗದವರನ್ನು ಹಿಡಿದು ಬಟ್ಟೆ ಮಾಡಿಸಿದರು. ಇದರಿಂದ ಖಾದಿ ಸಂಗ್ರಹವಾಯಿತು. ತಮಗನಿಸಿದ ಸಾಮಾಜಿಕ ಉಪಯುಕ್ತ ಕಾರ್ಯವನ್ನು ಮಾಡಲು ಹಿಂಜರಿಯದ ಕಾರಂತರು ಶಾಲೆಯ ಹುಡುಗರನ್ನು ಕಟ್ಟಿಕೊಂಡು ಬೀದಿಗಳಲ್ಲಿ ಬಟ್ಟೆಗಳನ್ನು ಮಾರಾಟ ಮಾಡತೊಡಗಿದರು. ಸಾಲ ಕೊಟ್ಟದ ಜನ ಬಟ್ಟೆ ಕೊಂಡರು. ಸಾಲ ಸಾಲವಾಗಿಯೇ ಉಳಿದುದರಿಂದ ಖಾದಿ ಕೈಗಾರಿಕೆಯ ವಿಚಾರದಲ್ಲಿ ಅವರಿಗಿದ್ದ ಅಭಿಮಾನವು ಕಡಿಮೆಯಾಯಿತು. ಕೊನೆಗೆ ಅಂಗಡಿಯನ್ನೇ ಸ್ವದೇಶಿ ಭಂಡಾರವನ್ನಾಗಿ ಮಾಡಿದರು. ಅದರಲ್ಲಿ ಸ್ವದೇಶಿ ಕಾಗದ ಪೆನ್ಸಿಲುಗಳ ವ್ಯಾಪಾರದಲ್ಲಿ ತೊಡಗಿದರು. ಈ ಎಲ್ಲಾ ಪ್ರಯತ್ನಗಳಿಂದಾಗಿ ಸಾಲ ಹೆಚ್ಚಾಗತೊಡಗಿತು. ಆದರೂ ಧೃತಿಗೆಡದೆ ಕಾರಂತರು ರಾಷ್ಟ್ರಾಭಿಮಾನದಿಂದಾಗಿ ಅದಕ್ಕೆ ಪೂರಕವಾದ ಹಲವಾರು ಕಾರ್ಯಗಳಲ್ಲಿ ತೊಡಗಿಕೊಂಡು ದುಡಿಯುತ್ತಲೆ ಬಂದವರು.

**ಸೆರೆಮನೆಗೆ ಹೋಗುವ ಸಿದ್ಧತೆ :**

ಸ್ವಾತಂತ್ರ್ಯಪೂರ್ವದಲ್ಲಿ ಕಾಂಗ್ರೆಸ್ಸಿನ ಪರವಾಗಿ ಕೆಲಸ ಮಾಡಿದವರು ಕಾರಂತರು. ಸಾಮಾನ್ಯವಾಗಿ ಅಂದಿನ ಸಂದರ್ಭದಲ್ಲಿ ಹೆಚ್ಚಾಗಿ, ಹೋದಲ್ಲೆಲ್ಲಾ ಇವರ ಬೆನ್ನ ಹಿಂದೆಯೇ ಪೊಲೀಸ್ ರಿಪೋರ್ಟರುಗಳು ಇದ್ದೇ ಇರುತ್ತಿದ್ದರು. ಹೀಗಾಗಿ ರಾಜಕೀಯ ಆರೋಪದ ಮೇಲೆ ಸೆರೆಮನೆಗೆ ಹೋಗುವ ಪ್ರಸಂಗ ಯಾವಾಗಲೂ ಇದ್ದೇ ಇತ್ತು. ಚಳುವಳಿಗೆ ಇಳಿದಂದಿನಿಂದಲೂ ಇವರು ಸೆರೆಮನೆಗೆ ಹೋಗುವ ಸಿದ್ಧತೆಯನ್ನು ಮಾಡಿಕೊಂಡಿದ್ದರು. ಸೆರೆಮನೆಯಲ್ಲಿ ನೀಡುವ ಆಹಾರಕ್ಕಿಂತಲೂ ಮಿತವ್ಯಯವಾದ ಆಹಾರವನ್ನು ಪ್ರತಿನಿತ್ಯ ಉಪಯೋಗಿಸುತ್ತಿದ್ದದ್ದು ವಿಶೇಷವಾದುದು. ಸಾಮಾಜಿಕ ಸೇವೆಯಲ್ಲಿ ತೊಡಗುವವರು ಕೆಲವು ಲೌಖಿಕವಾದ ಸುಖಗಳನ್ನು ವರ್ಜಿಸಬೇಕಾಗುವುದು ಅನಿವಾರ್ಯ. ಅಂತೆಯೇ ಕಾರಂತರೂ ಈ ಹೋರಾಟದ ಬದುಕಿನಲ್ಲಿ ಸರಳವಾದ ಜೀವನವನ್ನು ನಡೆಸಿಕೊಂಡು ಬಂದವರಾಗಿದ್ದರು.

**ಸಬರಮತಿ ಆಶ್ರಮದ ವಾಸ :**

ಇಂದಿನ ವೈಭವೋಪ್ರೇತವಾದ ವಿಲಾಸಿ ಜೀವನಗಳಿಂದಾಗಿ ಮಾನಸಿಕವಾಗಿ ಆತ್ಮ ಸಂತೋಷವನ್ನು ಕಳೆದುಕೊಂಡು ಸ್ವಸ್ಥ ಸಮಾಜ ನಿರ್ಮಾಣಕ್ಕೆ ಕಂಟಕಪ್ರಾಯರಾಗುತ್ತಿರುವ ಪ್ರಸ್ತುತ ವ್ಯಕ್ತಿಗಳಿಗೆ ಕಾರಂತರ ಸರಳ ಜೀವನ ಆದರ್ಶಪ್ರಾಯವಾದುದು. ಇದಕ್ಕೆ ಅವರು ಗಾಂಧೀಜಿಯವರ ಸಬರಮತಿ ಆಶ್ರಮದಲ್ಲಿ ಕೆಲವು ದಿನಗಳನ್ನು ಕಳೆದುದು ಪ್ರಭಾವವನ್ನು ಬೀರಿದೆ ಎನ್ನಬಹುದು. ಸದಾ ಯಾವುದಾದರೊಂದು ಕಾರ್ಯದಲ್ಲಿ ತೊಡಗಿಕೊಂಡು ಆರೋಗ್ಯಪೂರ್ಣವಾದ ಮನೋಸ್ಥಿತಿಯನ್ನು ಹೊಂದಿರುವುದನ್ನು ಕಲಿತರು. ಹೀಗೆ ಸಬರಮತಿ ಆಶ್ರಮದಲ್ಲಿ ಕಲಿತದ್ದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಯಶಸ್ವಿ ವ್ಯಕ್ತಿತ್ವವನ್ನು ಕಟ್ಟಿಕೊಂಡವರು ಕಾರಂತರು.

**ರಾಷ್ಟ್ರಕ್ಕಾಗಿ ಮಡಿಯಲೂ ಸಿದ್ಧ :**

ಸ್ವಾತಂತ್ರ್ಯಪೂರ್ವದಲ್ಲಿ ಕಾರಂತರಿಗೆ ತನಗಿಂತ, ತನ್ನ ಕುಟುಂಬಕ್ಕಿಂತ ಸಮಾಜ, ಸಮಾಜದ ಹಿತಾಸಕ್ತಿ ಮುಖ್ಯವಾಗಿತ್ತು. ಅದಕ್ಕಾಗಿ ಅಂದಿನ ರಾಷ್ಟ್ರೀಯ ಚಳುವಳಿಯ ಮುಂದಾಳುಗಳಲ್ಲಿ ಒಬ್ಬ ರಾಗಿದ್ದ ಡಾ. ನಾ.ಸು.ಹಾರ್ಡಿಕರವರ ಸೇವಾದಳದ ಪ್ರತಿಜ್ಞೆಗೂ ಸಮಾನಮನಸ್ಕರಾದ ಕಾರಂತರು ಸಹಿ ಹಾಕಿದ್ದರು. 'ರಾಷ್ಟ್ರಕ್ಕಾಗಿ ಮಡಿಯಲೂ ಸಿದ್ಧ ' ಎಂಬುದು ಆ ಪ್ರತಿಜ್ಞೆಯ ಸಾರವಾಗಿತ್ತು. ದೇಶಸೇವೆಗೆ ತೊಡಗಿದ ಒಬ್ಬ ದೇಶಾಭಿಮಾನಿಗೆ ತನ್ನ ಕುಟುಂಬ ಮುಂತಾದ ವೈಯಕ್ತಿಕವಾದ ವಿಚಾರಗಳು ಗಣನೆಗೆ ಬರುವುದಿಲ್ಲ. ತಂಗಿಯ ಲಗ್ನ ಇದ್ದರೂ 'ಕೂಡಲೆ ಗದುಗಿಗೆ ಹೊರಟು ಬಾ' ಎಂಬ ಸೇವಾದಳದ ತಂತಿ ಸಂದೇಶದಿಂದ ವೈಯಕ್ತಿಕ ವಿಚಾರವನ್ನು ಬದಿಗೊತ್ತಿ ಗದುಗಿಗೆ ಹೊರಟಿದ್ದು ಅಂದಿನ ಸ್ವಾತಂತ್ರ್ಯಪೂರ್ವದ ಕಾರಂತರ ಮನಸ್ಥಿತಿಯನ್ನು ಬಿಂಬಿಸುವಂತಹುದು.

‘ದೇಶಸೇವೆ ’ ಎಂಬುದು ಬರಿಯ ರಾಜಕೀಯ ಸ್ವಾತಂತ್ರ್ಯವೊಂದೇ ಅಲ್ಲ :

‘ದೇಶಸೇವೆ ’ ಎಂಬುದು ಬರಿಯ ರಾಜಕೀಯ ಸ್ವಾತಂತ್ರ್ಯವೊಂದೇ ಎಂಬರ್ಥದಲ್ಲಿ ಕಾರಂತರು ತಿಳಿದಿರಲಿಲ್ಲ. ತಾವು ಇರುವಲ್ಲಿಯೇ ಸಮಾಜಮುಖಿಯಾಗಿ ಮಾಡುವ ಪ್ರತಿಯೊಂದು ಕಾರ್ಯವೂ ಸಹ ದೇಶಸೇವೆ ಎಂದು ಭಾವಿಸಿದ್ದರು.

> “ ‘ದೇಶಸೇವೆ ’ ಎಂಬ ಮಾತು ತೀರ ದೊಡ್ಡ ಮಾತು. ಒಂದು ಅರ್ಥದಲ್ಲಿ ಅದು ಎಲ್ಲವನ್ನೂ ಹೇಳುತ್ತದೆ. ಇನ್ನೊಂದು ಅರ್ಥದಲ್ಲಿ ಅದು ಯಾವುದನ್ನು ಹೇಳುವುದಿಲ್ಲ. ದೊಡ್ಡ ಮಾತು ಅರ್ಥದ ಸ್ಪಷ್ಟತೆಯಿಲ್ಲದೆ ಉಂಟಾದುದು. ದೇಶದ ಇಂಥದೇ ಬಗೆಯ ಉನ್ನತಿಗಾಗಿ ಪ್ರಯತ್ನಿಸಬೇಕೆಂಬುದು ಆ ಮಾತಿನಲ್ಲಿ ಕಾಣಿಸುತ್ತದೆಯೇ ? ದೇಶದ ಬಿಡುಗಡೆ ಒಂದೇ ಆ ಕೆಲಸವೇ ? ರಾಜಕೀಯ ಬಿಡುಗಡೆ, ಸಂಪ್ರದಾಯಗಳ ಬಿಡುಗಡೆ, ಅಂಧ ಶ್ರದ್ಧೆಯಿಂದ ಬಿಡುಗಡೆ, ಇವೆಲ್ಲಾ ಕಟ್ಟುಪಾಡುಗಳಲ್ಲಿ ಸಿಲುಕಿದ ಮನುಷ್ಯನ ಬುದ್ಧಿ, ನಡತೆಗಳ ಬಿಡುಗಡೆ -ಇವುಗಳಲ್ಲಿ ಯಾವುದು ತಾನೇ ದೇಶ ಸೇವೆಯಲ್ಲ ? ಬರಿಯ ರಾಜಕೀಯ ಸ್ವಾತಂತ್ರ್ಯವೊಂದೇ ಆ ಸೇವೆಯೇನು ? ......... ............. ಸೇವೆ ಎಂಬುದು ಒಂದು ಒಣ ಹೆಮ್ಮೆಯ ಮಾತಾಗುತ್ತದೆ ”[೩]

ತಮ್ಮ ಆತ್ಮಕಥನದಲ್ಲಿನ ಈ ಮಾತುಗಳನ್ನು ಗಮನಿಸಿದಾಗ ಕಾರಂತರ ನಿರಂತರವಾದ ಕಾರ್ಯ ಚಟುವಟಿಕೆಗಳ ಹಿಂದೆ ಇದ್ದಂತಹ ‘ದೇಶಸೇವೆ ’, ಜೊತೆಗೆ ದೇಶ ಮತ್ತೆ ಯಾವ ವಿಚಾರಗಳಲ್ಲಿ ಬಿಡುಗಡೆಯನ್ನು ಪಡೆಯಬೇಕಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಇದುವರೆಗೂ ಈ ಅಧ್ಯಾಯದಲ್ಲಿ ಕಾಲಮಾನದ ಚಾರಿತ್ರ್ಯಕವಾದ ಒತ್ತಡದಿಂದ ಅಥವಾ ಸಂದರ್ಭದ ಅನಿವಾರ್ಯತೆಯಿಂದಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಕಾರಂತರೂ ಸಹ ಅನ್ಯ ಸಂಸ್ಕೃತಿಗೆ ಮುಖಾಮುಖಿಯಾದುದನ್ನು ಗಮನಿಸಲಾಯಿತು. ಗಾಂಧೀಜಿಯವರ ಪ್ರಭಾವದಿಂದಾಗಿ ತಮ್ಮದೇ ರೀತಿಯ ದೇಶ ಸೇವೆಯ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡು ಅದಕ್ಕಾಗಿ ಅನೇಕ ವೈಯಕ್ತಿಕವಾದ ಹಿತಾಸಕ್ತಿಗಳನ್ನು ತೊರೆದಂತಹವರು. ಸ್ವರಾಜ್ಯಕ್ಕಾಗಿ ನಿಧಿಯ ಸಂಗ್ರಹದಲ್ಲಿ ತೊಡಗಿಸಿಕೊಂಡರು. ಸ್ವದೇಶಿ ವಸ್ತುಗಳ ಬಳಕೆ, ವಿದೇಶಿ ವಸ್ತುಗಳ ಬಹಿಷ್ಕಾರದ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಾ , ಸ್ವತಃ ಖಾದಿ ಉತ್ಪನ್ನವನ್ನು ತಯಾರಿಸಿ ಮಾರಾಟ ಮಾಡುವ ಕಾರ್ಯದಲ್ಲಿ ತೊಡಗಿದರು. ಸಬರಮತಿ ಆಶ್ರಮದಲ್ಲಿ ಸರಳ ಜೀವನವನ್ನು ರೂಢಿಸಿಕೊಳ್ಳುವುದರ ಮೂಲಕ ಆದರ್ಶವಾದ ವ್ಯಕ್ತಿತ್ವವನ್ನು ಕಟ್ಟಿಕೊಂಡರು. ದೇಶಸೇವೆ ಎಂಬುದು ಕೇವಲ ರಾಜಕೀಯ

ಸ್ವಾತಂತ್ರ್ಯ ಒಂದೇ ಅಲ್ಲ ಎಂದು ಸಮಾಜಮುಖಿಯಾಗಿ ಮಾಡುವ ಪ್ರತಿಯೊಂದು ಕಾರ್ಯವೂ ದೇಶ ಸೇವೆಯೇ ಎಂದು ಭಾವಿಸಿ ಸಮಾಜದಲ್ಲಿ ಕ್ರಿಯಾಶೀಲರಾದ ಕಾರಂತರ ಈ ಎಲ್ಲಾ ಚಟುವಟಿಕೆಗಳ ಹಿಂದೆಯೂ ಸಾಂಸ್ಕೃತಿಕವಾದ ಸಂಘರ್ಷದ ನೆಲೆಗಳಿರುವುದನ್ನು ಗುರುತಿಸಬಹುದಾಗಿದೆ. ಆದುದರಿಂದ ಸ್ವಾತಂತ್ರ್ಯ ಪೂರ್ವದಲ್ಲಿನ ಕಾರಂತರನ್ನು ಅವರ ಆತ್ಮಕಥಾನಕಗಳ ಹಿನ್ನೆಲೆಯಲ್ಲಿ ಗ್ರಹಿಸಿ ಚರ್ಚೆಗೆ ಒಳಪಡಿಸಿದ್ದೇನೆ. ಸ್ವಾತಂತ್ರ್ಯಾ ನಂತರದಲ್ಲಿ ಅವರ ಸಾಂಸ್ಕೃತಿಕ ಸಂಘರ್ಷಗಳು ಭಿನ್ನವಾದ ನೆಲೆಯಲ್ಲಿ ವಿಭಿನ್ನತೆಯನ್ನು ಪಡೆದುದರಿಂದ ಅದನ್ನೂ ಸಹ ಚರ್ಚಿಸಲು ಪ್ರಯತ್ನಿಸಿದ್ದೇನೆ.

## ೨.೨. ಸ್ವಾತಂತ್ರ್ಯೋತ್ತರದಲ್ಲಿ ಕಾರಂತರು

" ಕಾಲ ಸರಿದಂತೆ - ಜನತಾಸೇವೆ, ದೇಶಭಕ್ತಿ ಎಂಬ ಪದಗಳು ಜನವಂಚನೆಯ ಮೋಡಿ ಮಂತ್ರಗಳೇ ಆದವು. ಹಳೆಯ ರಾಜರುಗಳನ್ನು, ಸುಲ್ತಾನರುಗಳನ್ನು ಓಡಿಸಿದ ಜನ, ಅದರ ನಾಲ್ಮಡಿ ಸಂಖ್ಯೆಯಲ್ಲಿ ಅವರು ಕಳಚಿಬಿಟ್ಟ ಪಾಪಾಸುಗಳಲ್ಲಿ ಕಾಲನ್ನು ತುರುಕಿ, ನವಯುಗದ ರಾಜಾಧಿ ರಾಜರಾಗಲು ಹಂಬಲಿಸುತ್ತಿರುವಂತೆ ಕಾಣಿಸಿತು. 'ಕಾಂಗ್ರೆಸ್ಸು' ಸಂಸ್ಥೆಯ ಮೇಲೆ ನನಗೆ ಪೂರ್ವದಲ್ಲಿ ಅಭಿಮಾನವೆಲ್ಲಾ ಮಣ್ಣುಗೂಡಿತು."

-ಶಿವರಾಮ ಕಾರಂತ

## ೨.೨. ಸ್ವಾತಂತ್ರ್ಯೋತ್ತರದಲ್ಲಿ ಕಾರಂತರು :

ಸ್ವಾತಂತ್ರ್ಯ ಪೂರ್ವದಲ್ಲಿ ಕಾರಂತರ ಕಾರ್ಯಚಟುವಟಿಕೆಗಳನ್ನು, ಅವರ ಸಾಮಾಜಿಕವಾದ ಪ್ರತಿಕ್ರಿಯೆಗಳನ್ನು, ಅವುಗಳಲ್ಲಿ ತಮ್ಮದೇ ಆದಂತಹ ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡುದುದನ್ನು ಇದುವರೆಗೂ ಗಮನಿಸಿದೆವು. ಆದರೆ ಸ್ವಾತಂತ್ರ್ಯ ನಂತರದಲ್ಲಿನ ಅವರ ಪ್ರತಿಕ್ರಿಯೆಗಳಿಗೂ ಸ್ವಾತಂತ್ರ್ಯ ಪೂರ್ವದ ಅವರ ಪ್ರತಿಕ್ರಿಯೆಗಳಿಗೂ ಭಿನ್ನತೆಯನ್ನೆ ಗುರ್ತಿಸಬಹುದಾಗಿದೆ. ಅದಕ್ಕೆ ಸ್ವಾತಂತ್ರ್ಯದ ತರುವಾಯ ಬದಲಾದ ರಾಜಕೀಯ ಬೆಳವಣಿಗೆಗಳು ಕಾರಣವಾದವುಗಳು. ಆದುದರಿಂದ ಆ ವಿಚಾರವನ್ನು ಇಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದೇನೆ.

'' ಕಾಂಗ್ರೇಸ್ಸನ್ನು ಕುರಿತು ಆರಂಭದಲ್ಲಿ ನಾನೆಷ್ಟು ಅಭಿಮಾನಿಯಾಗಿದ್ದೆನೋ ನಾಲ್ಕನೆಯ ದಶಕದಲ್ಲಿ ಅಷ್ಟೇ ನಿರಭಿಮಾನಿಯಾದೆ........ ದಿವಂಗತ ಕಾರ್ನಾಡು ಸದಾಶಿವರಾಯರನ್ನು ಮೆಟ್ಟಿ , ಮೆರೆದ ಶಕುನಿಗಳು ನಮ್ಮ ನವನಾಯಕರಾದ ಮೇಲೆ, ನನ್ನಂತಹನು ರಾಜಕೀಯ ಕಂಡು ತಲೆ ತಗ್ಗಿಸಬೇಕಾಯಿತು ''

''ದಿನ ಸರಿದಂತೆ ನನಗೆ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಕಾಂಗ್ರೇಸ್ಸು ಸಂಸ್ಥೆ ಸಮಯ ಸಾಧಕರಿಂದ ತುಂಬಿದ ಸ್ವರ್ಗವಾಗುತ್ತ ಬಂದಂತೆ ಕಾಣಿಸಿತು. ಗಾಂಧೀಜಿ ' ಕಾಂಗ್ರೇಸ್ಸನ್ನು ವಿಸರ್ಜಿಸಿರಿ ' ಎಂದ ಮಾತು ಇಂಥ ದೂರದರ್ಶಿತ್ವದ ಬುದ್ಧಿ ಮಾತಲ್ಲದೆ ಬೇರೆಯಲ್ಲ.''

''ಕಾಲ ಸರಿದಂತೆ - ಜನತಾಸೇವೆ, ದೇಶಭಕ್ತಿ ಎಂಬ ಪದಗಳು ಜನ ವಂಚನೆಯ ಮೋಡಿ ಮಂತ್ರಗಳೇ ಆದವು. ಹಳೆಯ ರಾಜರುಗಳನ್ನು ಸುಲ್ತಾನರುಗಳನ್ನು ಓಡಿಸಿದ ಜನ, ಅದರ ನಾಲ್ಮಡಿ ಸಂಖ್ಯೆಯಲ್ಲಿ ಅವರು ಕಳಚಿ ಬಿಟ್ಟ ಪಾಪಾಸುಗಳಲ್ಲಿ ಕಾಲನ್ನು ತುರುಕಿ, ನವಯುಗದ ರಾಜಾಧಿರಾಜರಾಗಲು ಹಂಬಲಿಸುತ್ತಿರುವಂತೆ ಕಾಣಿಸಿತು. 'ಕಾಂಗ್ರೆಸ್ಸು ' ಸಂಸ್ಥೆಯ ಮೇಲೆ ನನಗೆ ಪೂರ್ವದಲ್ಲಿದ್ದ ಅಭಿಮಾನವೆಲ್ಲ ಮಣ್ಣಗೂಡಿತು. ''

''ಗಾಂಧೀಜಿ ಬೋಧಿಸಿದ ಸತ್ಯ, ಅಹಿಂಸೆಗಳ ಜಪ ಎಲ್ಲರ ಬಾಯಿಯಲ್ಲೂ ಕೇಳಿಸತೊಡಗಿತು. ಸ್ವಾರ್ಥದ ಜೀವನಕ್ಕೆ ಅದೊಂದು ಮುಖವಾಡವಾಯಿತು. ''[೪]

ಕಾರಂತರಿಗೆ ಕಾಂಗ್ರೇಸ್ಸನ್ನು ಕುರಿತು ಪ್ರಾರಂಭದಲ್ಲಿ ಅಭಿಮಾನ, ನಂತರದಲ್ಲಿ ಅದರ ಮೇಲಿನ ನಿರಭಿಮಾನ, ಅದರಲ್ಲಿ ತುಂಬಿ ಹೋದ ಸೋಗಲಾಡಿತನದ ನಾಯಕರ ಮೇಲೆ ಸಹಜವಾಗಿಯೇ

ಮೂಡಿದ ಆಕ್ರೋಶಗಳನ್ನು ವ್ಯಕ್ತಪಡಿಸಿದರು. ಮನಸ್ಪೂರ್ವಕವಾದ ಅಂದಿನ ದೇಶಭಕ್ತಿಗೂ ಗಾಂಧೀಜಿಯವರ ಸತ್ಯ, ಅಹಿಂಸೆಯನ್ನು ಸಮಯ ಸಾಧನೆಗೆ ಬಳಸಿಕೊಳ್ಳುವ ಸ್ವಾತಂತ್ರ್ಯಾ ನಂತರದ ಸಮಯ ಸಾಧಕರ ಬಗ್ಗೆ , ಆ ವ್ಯವಸ್ಥೆಯ ಬಗೆಗೆ ಅವರು ಎಷ್ಟು ರೋಸಿ ಹೋಗಿದ್ದರು ಎಂಬುದನ್ನು ಮೇಲೆ ಉದ್ದರಿಸಿರುವ ಮಾತುಗಳಲ್ಲಿ ಸ್ಪಷ್ಟವಾಗಿ ಗುರ್ತಿಸಬಹುದಾಗಿದೆ.

ಸ್ವಾತಂತ್ರ್ಯ ಬಂದ ತರುವಾಯ ಕಾಂಗ್ರೇಸ್ ಸಂಸ್ಥೆಯಲ್ಲಿ ತುಂಬಿ ಹೋದ ಸಮಯಸಾಧಕರು, ಜನತಾಸೇವೆ, ದೇಶಸೇವೆಯ ಮುಖವಾಡಗಳನ್ನು ಧರಿಸಿದ ಗೋಮುಖ ವ್ಯಾಘ್ರಗಳು, ಗಾಂಧಿ ಯವರ ಅಹಿಂಸೆ, ಸತ್ಯಗಳನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ಮೆರೆಯುತ್ತಿದ್ದ ಕಾಲದಲ್ಲಿ ನಿಜವಾದ ದೇಶಭಕ್ತರಾದ ಕಾರಂತರಂತಹವರಿಗೆ ಮಾನಸಿಕವಾಗಿ ಆಘಾತವನ್ನು ನೀಡಿದಂತಹ ವಿಚಾರಗಳಾಗಿದ್ದವು. ಅಂದಿನ ವ್ಯವಸ್ಥೆಯ ಬಗೆಗೆ ನಿರಭಿಮಾನದ ಪ್ರತಿಕ್ರಿಯೆಗಳನ್ನು ಅವರ ಈ ಮೇಲಿನ ಮಾತುಗಳಲ್ಲಿ ನಾವು ಕಾಣಬಹುದಾಗಿದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಸಂದರ್ಭವನ್ನು ತೆಗೆದುಕೊಂಡು ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಬರೆದಿರುವ 'ತಬರನ ಕಥೆ'ಯ ತಬರನ ಮನಸ್ಥಿತಿಯನ್ನು ಕಾರಂತರು ಉಲ್ಲೇಖಿಸಿದ ಮಾತುಗಳಿಗೆ ಪೂರಕವಾಗಿ ಇಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ.

ಪ್ರಜಾಸತ್ತೆಯನ್ನು ಕಾಯಬೇಕಾದ ಸಂಸ್ಥೆಗಳಲ್ಲಿ ಅಪ್ರಾಮಾಣಿಕ ಜನರ ಹಾವಳಿ ಅತಿಯಾದುದನ್ನು ಕಂಡು ಬೇಸತ್ತು ರಾಜಕೀಯ ಜೀವನದಲ್ಲಿ ಆಕರ್ಷಣೆ ಹುಟ್ಟಿರಲಿಲ್ಲವಾದರೂ, ಇಂತಹ ಸಂದಿಗ್ಧದಲ್ಲಿ ತಟಸ್ಥ ಜೀವನವೂ ಸಾಧ್ಯವಾಗಿರಲಿಲ್ಲ. ವ್ಯಕ್ತಿಗತವಾಗಿ ಇದಕ್ಕೆ ಪ್ರತಿಭಟನೆಯನ್ನು ಸೂಚಿಸಲು ೧೯೫೭ ರಲ್ಲಿ ಅಸೆಂಬ್ಲಿ ಚುನಾವಣೆಗೆ ಮತ್ತು ೧೯೮೯ ರಲ್ಲಿ ಉತ್ತರ ಕನ್ನಡ ಜಿಲ್ಲೆಯಿಂದ ಸಂಸತ್ ಸದಸ್ಯತ್ವಕ್ಕೆ ಸ್ಪರ್ಧಿಸಿ ಸೋತಿರುವುದನ್ನು ಗಮನಿಸಬಹುದು. ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಈ ರೀತಿಯಾಗಿ ಸಂಘರ್ಷಕ್ಕಿಳಿದವರು ಕಾರಂತರು.

ಕ್ರಿಯಾಶೀಲರಾದ ವ್ಯಕ್ತಿಗಳು ತಮ್ಮ ಸುತ್ತಮುತ್ತಲ ಆಗು -ಹೋಗುಗಳಿಗೆ ಸದಾ ಸ್ಪಂದಿಸುತ್ತಿರುತ್ತಾರೆ. ಅವರು ಎಂದಿಗೂ ಸುಮ್ಮನಿರುವವರಲ್ಲ ಎಂಬುದು ಲೋಕರೂಢಿಯಾದ ಮಾತು. ಇದು ಕಾರಂತರಿಗೂ ಅನ್ವಯಿಸುತ್ತದೆ. ಪ್ರಧಾನಿಯಾಗಿದ್ದ ಇಂದಿರಾಗಾಂಧಿಯವರು ನಮ್ಮ ಸಂವಿಧಾನಕ್ಕೆ ಅಪಚಾರವೆಸಗಿ, ಅದನ್ನು ತಿದ್ದುಪಡಿ ಮಾಡಿ, ನ್ಯಾಯಾಂಗವನ್ನು ಕಡೆಗಣಿಸಿ ೧೯೭೫ರಲ್ಲಿ ದೇಶದ ಮೇಲೆ ತುರ್ತು ಪರಿಸ್ಥಿತಿಯನ್ನು ಹೊರಿಸಿದರು. ಅಸಂಖ್ಯ ದೇಶಪ್ರೇಮಿಗಳಿಗೆ ಆಘಾತವನ್ನು ನೀಡಿದರು. ಭಾರತದ ಸ್ವಾತಂತ್ರ್ಯ ಜನಗಳ ಸ್ವಾತಂತ್ರ್ಯ ಎಂದು ತಿಳಿದಿದ್ದ ಕಾರಂತರು ಈ

ರೀತಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದಾಗ ಮಾತ್ರ ಸುಮ್ಮನಿದ್ದವರಲ್ಲ. ಕಾರಂತರಿಗೆ ದೊರೆತಿದ್ದ 'ಪದ್ಮಭೂಷಣ ' ಬಿರುದು ಜನಗಳ ಸರ್ಕಾರ ಕೊಟ್ಟಂತಹ ಬಿರಿದು. ಆ ಜನಗಳ ಹಕ್ಕನ್ನೇ ತುಚ್ಚೀಕರಿಸುವ ಸರ್ಕಾರಕ್ಕೆ ಒಂದು ಪತ್ರವನ್ನು ಬರೆದು ತಮ್ಮ ಬಿರುದನ್ನು ಹಿಂತಿರುಗಿಸಿ ಪ್ರತಿಕ್ರಿಯಿಸಿದರು.

ಸ್ವಾತಂತ್ರ್ಯಾ ನಂತರದಲ್ಲೂ ಕಾರಂತರೂ ಅಂದಿನ ಸಮಸ್ಯೆಗಳಿಗನುಗುಣವಾಗಿ ಆಗಲೂ ಪ್ರತಿಕ್ರಿಯಿಸಿದವರು. ಕರ್ನಾಟಕದ ಏಕೀಕರಣ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. 'ವಸಂತ' ಪತ್ರಿಕೆಯ ನಂತರ ಮತ್ತೆ ೧೯೫೧ ರಲ್ಲಿ 'ವಿಚಾರವಾಣಿ ' ಎಂಬ ಹೊಸ ವಾರ ಪತ್ರಿಕೆಯನ್ನು ಹುಟ್ಟು ಹಾಕಿದರು. ಇದರ ಮೂಲಕ ತಮ್ಮ ಪ್ರತಿಕ್ರಿಯೆಗಳನ್ನು ನೀಡುತ್ತ ಬಂದರು. ಅವರ ಈ ಪ್ರತಿರೋಧಗಳು ಕೇವಲ ರಾಜಕೀಯಕ್ಕಷ್ಟೇ ಸೀಮಿತವಾಗಿರಲಿಲ್ಲ. ಸಾಮಾಜಿಕ ನೆಲೆಯಲ್ಲಿಯೂ ಮುಂದುವರಿಸಿಕೊಂಡು ಬಂದರು. ಅಂತಹ ಸಾಮಾಜಿಕ ಸುಧಾರಣೆಗಳು ಯಾವುವು? ಅವುಗಳ ಮೂಲಕ ಯಾವ ರೀತಿಯಾಗಿ ಸಾಂಸ್ಕೃತಿಕವಾದ ಸಂಘರ್ಷವನ್ನು ಎದುರಿಸುವಂತಾಯಿತು? ಎಂಬ ವಿಚಾರಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ವಿವರಿಸಲಿದ್ದೇನೆ.

---

**ಅಡಿ ಟಿಪ್ಪಣಿಗಳು :**

೧. ಶಿವರಾಮ ಕಾರಂತ : 'ಹುಚ್ಚು ಮನಸ್ಸಿನ ಹತ್ತು ಮುಖಗಳು ', ಎಸ್.ಬಿ.ಎಸ್.ಪಬ್ಲಿಷರ್ಸ್ ಬೆಂಗಳೂರು, ೨೦೦೭, (ಹತ್ತನೇ ಮುದ್ರಣ ) ಪುಟ -೩೪.

೨. ಸೀತಾರಾಮಯ್ಯ ವಿ. - ನವೋದಯ ಪ್ರಚಾರ ಪುಸ್ತಕ ಮಾಲೆ -೪, 'ಶಿವರಾಮ ಕಾರಂತ ', ಮಹಾತ್ಮಗಾಂಧೀ ಮೆಮೋರಿಯಲ್ ಕಾಲೇಜು, ಉಡುಪಿ, ೧೯೫೫, ಪುಟ -೦೬, ೦೭.

೩. ಶಿವರಾಮ ಕಾರಂತ : 'ಹುಚ್ಚು ಮನಸ್ಸಿನ ಹತ್ತು ಮುಖಗಳು ', ಎಸ್.ಬಿ.ಎಸ್.ಪಬ್ಲಿಷರ್ಸ್ ಬೆಂಗಳೂರು, ೨೦೦೭, (ಹತ್ತನೇ ಮುದ್ರಣ ) ಪುಟ -೭೬, ೭೭.

೪. ಅದೇ, ಪುಟ - ೨೨೮.

## ಅಧ್ಯಾಯ - ೩

# ಸಮಾಜ ಸುಧಾರಣೆಯ ಸಾಮಾಜಿಕ ಚಟುವಟಿಕೆಗಳಲ್ಲಿನ ಸಂಘರ್ಷಗಳು

" ಹಿರಿಯರ ಪೋಷಣೆಯನ್ನು ಕಡಿದು, ಶಾಲೆಯ ಹಂಬಲ ತೊರೆದು, ಸಮಾಜದ ವಿಶಾಲ ವಿದ್ಯಾಲಯದಲ್ಲಿ ಕಾಲಿಕ್ಕಿದಾಗಲೇ ನನ್ನ ವ್ಯಕ್ತಿ ಜೀವನಕ್ಕೆ ಪುಟ ದೊರಕಿತು. ಅಂದಿನಿಂದ ಈತನಕ ಪರ್ಯಾಲೋಚಿಸಿದರೂ, ನಾನು ಮಾಡಿದ ಆ ತೀರ್ಮಾನ ತಪ್ಪೆಂದು ನನಗೆ ಕಾಣುವುದಿಲ್ಲ. ಶಾಲಾ ಕಾಲೇಜಿನ ಹೊರಗೆ ನಾನು ಕಲಿತುದರ ನೂರನೆಯ ಒಂದಂಶವನ್ನೂ ಅದರೊಳಗೆ ಕಲಿತಿಲ್ಲವೆಂದೇ ಅನಿಸುತ್ತದೆ. ಓದು - ಬರಹ ಬಿಟ್ಟು ಇನ್ನಾವ ಕಲೆಯನ್ನೂ ಕಾಲೇಜು ಕೊಡಲಿಲ್ಲ. ಶಾಲೆಯ ಗೋಡೆಗಳ ಹೊರಗೆ ಕಲಿತ ಪಾಠವೇ ನನ್ನ ಬದುಕನ್ನು ಸಾಗಿಸಿಕೊಂಡು ಹೋಗುತ್ತಿವೆ - ಎಂದೂ ನನಗೆ ಅನಿಸುತ್ತಿದೆ. "

-ಶಿವರಾಮ ಕಾರಂತ

# ಸಮಾಜ ಸುಧಾರಣೆಯ ಸಾಮಾಜಿಕ ಚಟುವಟಿಕೆಗಳಲ್ಲಿನ ಸಂಘರ್ಷಗಳು

ಕಾಲೇಜಿನಿಂದ ಹೊರಬಂದ ತರುಣ ಕಾರಂತರು ಪ್ರಾರಂಭದ ವರ್ಷಗಳಲ್ಲಿ ಪ್ರತಿ ಕಾರ್ಯಗಳು 'ರಾಷ್ಟ್ರಾಭಿಮಾನ'ದ ದ್ಯೋತಕವಾದವು. ಆದರೆ ನಂತರದ ಕೆಲವೇ ವರ್ಷಗಳಲ್ಲಿ ಅವರ ಭಾವನೆಗಳು, ವಿಚಾರಧಾರೆಗಳು ವಾಸ್ತವ ಜಗತ್ತಿನ ಸಾಂಸ್ಕೃತಿಕ ನೆಲೆಗಳನ್ನು ಗ್ರಹಿಸತೊಡಗಿದವು. ಅದರ ಪರಿಣಾಮವಾಗಿ 'ದೇಶಸೇವೆ'ಯ ಕೆಲವು ಭ್ರಮಾತ್ಮಕವಾದ ಕಲ್ಪನೆಗಳಿಂದ ಹೊರಬಂದರು. ನಿಷ್ಠೆ , ಪ್ರಾಮಾಣಿಕವಾದ ಪ್ರಯತ್ನಗಳ ಮೂಲಕ ಕೈಲಾದಷ್ಟು ಸಾಮಾಜಿಕವಾದ ಕಾರ್ಯಗಳನ್ನು ನಿರ್ವಹಿಸುವದೆ ನಾವು ಮಾಡುವ 'ನಾಡಿನ ಸೇವೆ 'ಎಂದು ಭಾವಿಸಿ ಜೀವಮಾನದ ಬದುಕಿನುದ್ದಕ್ಕೂ ಹಲವಾರು ರೀತಿಯ ವಿಭಿನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು.

ಕಾರಂತರ ಸಾಮಾಜಿಕ ಕಾಳಜಿಗಳು ಮತ್ತು ಅವರ ಪ್ರಯೋಗಗಳನ್ನು ಕುರಿತು ವಿಮರ್ಶಕರಾದ ಈಶ್ವರ ದೈತೋಟ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ -

> '' ಕುಡಿಮೀಸೆ ತರುಣ ಕಾರಂತರಲ್ಲಿ ಸಮಾಜ ಸುಧಾರಣೆ ಕೆಚ್ಚು ಬಹಳವಿತ್ತು. ಅವರು ಸಾಹಿತ್ಯ ಕೃತಿ ರಚನೆ ಪ್ರಾರಂಭಿಸಿದ್ದು, ಅದರ ಜೊತೆಯಲ್ಲಿಯೇ ಪತ್ರಿಕಾ ಪ್ರಕಟಣೆಗೆ ಕೈಹಾಕಿದ್ದು, ಮೂಲತಃ ಸಮಾಜ, ಸಮಾಜದಲ್ಲಿರುವ ಕುಂದುಕೊರತೆಗಳನ್ನು ನಿವಾರಿಸುವ ಉದ್ದೇಶದಿಂದಲೇ ಎಂಬುದು ಅವರ ಪ್ರಾರಂಭಿಕ ಬರವಣಿಗೆಗಳಿಂದ ಶೃತಪಡುತ್ತದೆ.
>
> ಕಾರಂತರ ಸಾಮಾಜಿಕ ಚಿಂತನೆ ಮುಂದಿನ ಜನಾಂಗದ ಬಗೆಗಿನ ಕಾಳಜಿಯೊಂದಿಗೆ ಪ್ರಕಟಗೊಳ್ಳುತ್ತದೆ. ಸ್ವತಃ ತಮ್ಮ ಮಕ್ಕಳನ್ನು ಬೆಳೆಸುವುದರಿಂದ ಹಿಡಿದು ನಾಡಿನ ಎಲ್ಲ ಮಕ್ಕಳ ಮಾನಸಿಕ -ಅಭ್ಯುದಯಕ್ಕೆ ಅವರು ನಡೆಸಿದ ಪ್ರಯೋಗಗಳು, ಪ್ರಾಮಾಣಿಕ ಪ್ರಯತ್ನಗಳು ಈ ಹಿರಿಯರ ಹೃದಯದಾಳವನ್ನು ತೆರೆದಿಡುತ್ತವೆ.
>
> ಮಕ್ಕಳ ಓದು, ಕಲಿಕೆ, ಮನೋರಂಜನೆ ಈ ಚಿಣ್ಣರ ವ್ಯಕ್ತಿತ್ವ ವಿಕಸಿಸುವಂತಿರಬೇಕು ಎಂಬ ಮಹದಾಸೆಯಿಂದ ಪುತ್ತೂರಿನಲ್ಲಿ ಕಾರಂತರು ಸ್ಥಾಪಿಸಿದ ಬಾಲವನ, ನಿರಂತರವಾಗಿ ದುಡಿದು ರಚಿಸಿದ ವೈಜ್ಞಾನಿಕ ವಿಷಯ ವಿಶ್ವಕೋಶಗಳು, ಜಾನಪದ ಪ್ರಯೋಗಗಳು ಹೀಗೆ ಪ್ರತಿಯೊಂದು ಅವರ ಸಾಮಾಜಿಕ ಕಳಕಳಿಗೆ ಅವಿಚ್ಛಿನ್ನ ಸಾಕ್ಷಿಯಾಗಿ ಬೆಳಗುತ್ತಿವೆ ''[೧]

ಕಾರಂತರ ಕಾರ್ಯಮುಖಗಳು ಹಲವಾರು. ಅವೆಲ್ಲವೂ ಸಮಾಜದಲ್ಲಿನ ಕುಂದು -

ಕೊರತೆಗಳನ್ನು ನಿವಾರಿಸುವ ಸಾಮಾಜಿಕ ಕಳಕಳಿಯಿಂದ ಕೂಡಿದಂತಹವೇ ಆಗಿದ್ದವು. ಅವು ಕೇವಲ ವರ್ತಮಾನಕ್ಕೆ ಮಾತ್ರವೇ ಸೀಮಿತವಾದವಾಗಿರಲಿಲ್ಲ. ಭವಿಷ್ಯದ ಮುಂದಿನ ಪೀಳಿಗೆಯವರಿಗೂ ಅದರ ಪ್ರಯೋಜನಗಳು ದೊರೆಯಬೇಕೆಂಬ ಅವರ ದೂರದರ್ಶಿತ್ವವನ್ನು ಮೇಲಿನ ಉದ್ದರಣೆಯ ಮಾತುಗಳಲ್ಲಿ ನೋಡಬಹುದಾಗಿದೆ. ಕಾರಂತರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಅವರ ಸಮಾಜಮುಖಿಯಾದ ಚಟುವಟಿಕೆಗಳೂ ಪ್ರಮುಖವಾದವು. ವೇಶ್ಯೆಯರ ಸಾಮಾಜಿಕ ಬದುಕು, ಅವರ ಧಾರುಣವಾದ ಸ್ಥಿತಿಯಿಂದ -ಸುಧಾರಿಸಿದ ಜೀವನದೆಡೆಗೆ ಸ್ವತಃ ಅವರ ಮನವೊಲಿಸಿ ಹೊಸ ಬಾಳನ್ನು ನೀಡಿದರು. ಬಾಲ್ಯ ವಿವಾಹಗಳ ಸಾಮಾಜಿಕ ದುಷ್ಪರಿಣಾಮಗಳ ಬಗೆಗೆ ಅರಿವು ಮೂಡಿಸಿದರು. ಗ್ರಾಮೋದ್ಧಾರಗಳಲ್ಲಿ ತೊಡಗಿಸಿಕೊಂಡರು. ಅಸ್ಪೃಶ್ಯತಾ ನಿವಾರಣೆಯ ಸಲುವಾಗಿ ಮದ್ಯಪಾನ ನಿಷೇಧಕ್ಕಾಗಿ ಅಂದಿನ ಸಾಮಾಜಿಕ ನೆಲೆಗಳ ಜೊತೆಗೆ ಪ್ರತಿರೋಧನಗಳನ್ನು ಮಾಡುತ್ತ ಬಂದರು. 'ನಮ್ಮ ಸಂಪ್ರದಾಯವನ್ನು ಬದಲಿಸುವಾಗ, ಬೆಳೆಯಿಸುವಾಗ ಯಾವ ಪ್ರಯೋಜನಕ್ಕಾಗಿ ಅದನ್ನು ಮಾಡುತ್ತಿದ್ದೇವೆ ಎನ್ನುವ ಜ್ಞಾನವಿಲ್ಲದೆ ಮಾಡುವ ಸುಧಾರಣೆಗಳಿಂದ ಹಾನಿಯೇ ಆದೀತು' ಎನ್ನುವ ಅರಿವನ್ನು ಇಟ್ಟುಕೊಂಡೆ ಸುಧಾರಣೆಯಲ್ಲಿ ತೊಡಗಿದವರು. ೧೯೨೪ ರಲ್ಲಿ ಅವರ ಜಿಲ್ಲೆಯಲ್ಲಿ ಬಹಳ ದೊಡ್ಡ ನೆರೆ ಹಾವಳಿ ಉಂಟಾದ ಸಂದರ್ಭದಲ್ಲಿ ಧರ್ಮಾರ್ಥ ಅಕ್ಕಿ ಹಂಚುವ ಡಿಪೋವಿನಲ್ಲಿ ಕುಳಿತು ಎರಡು ತಿಂಗಳು ಸಮಾಜ ಸೇವೆಯಲ್ಲಿ ತೊಡಗಿದರು. ಅಲ್ಲಿನ ಬಡತನ, ಅವರಿಗಾದ ನಷ್ಟಗಳು, ಇವೆಲ್ಲವುಗಳ ವೀಕ್ಷಣೆಯು ಕಾರಂತರ ಮೇಲೆ ಸಾಮಾಜಿಕ ಜೀವನದಲ್ಲಿ ಪ್ರಭಾವ ಬೀರಿದವು.

ಬಾಲ ವಿಧವೆಯರ ವಿವಾಹ :

ಪುರುಷ ಪ್ರಧಾನವಾದ ಸಮಾಜದಲ್ಲಿ ಅವನಿಗೆ ಮಾತ್ರ ಅನುಕೂಲವಾದಂತಹ ರೀತಿ -ನೀತಿಗಳನ್ನು ಮಾಡಿಕೊಂಡು ಅದರ ಕಾರ್ಯಾರ್ಥ ಸಾಧನಕ್ಕಾಗಿ ಸ್ತ್ರೀಸಮೇತವಾಗಿ ಉಳಿದೆಲ್ಲವನ್ನು ಸ್ವಾರ್ಥತೆಯಿಂದ ಬಲಿಪಶುವಾಗಿಸತೊಡಗಿದನು. ಹೆಂಡತಿ ಸತ್ತರೆ ಎಷ್ಟು ಮದುವೆ ಬೇಕಾದರೂ ಆಗಬಹುದಾದ ಪುರುಷ, ಗಂಡ ಸತ್ತಾಗ ಹೆಂಡತಿ ಸಹಗಮನ ಮಾಡಬೇಕು ಇಲ್ಲವೆ ಜೀವನ ಪರ್ಯಂತ ವಿಧವೆಯಾಗಿರಬೇಕಿತ್ತು. ಬಾಲ್ಯ ವಿವಾಹಗಳು ಜಾರಿಯಲ್ಲಿದ್ದ ಆ ಸಂದರ್ಭದಲ್ಲಿ ಗಂಡನನ್ನು ಕಳೆದುಕೊಂಡರೆ ಸಾಯುವವರೆಗೂ ಅಮಂಗಳೆಯಾಗಿ ನಿಕೃಷ್ಟವಾದ ಜೀವನ ನಡೆಸುವ ಅವರ ದೀನಾವಸ್ಥೆಯನ್ನು ಸ್ವತಃ ಕಂಡಿದ್ದ ಕಾರಂತರು ಈ ಅನಿಷ್ಟ ಪದ್ಧತಿಗಳ ವಿರುದ್ಧ ಸಮಾಜದಲ್ಲಿ ಅರಿವು ಮೂಡಿಸಲು ಮುಂದಾದರು. ಕಾರಂತರಿಗೆ ಪರಿಚಯವಿದ್ದ ನಟ ಹದಿನೆಂಟು ವರ್ಷದ ಬಾಲ ವಿಧವೆಯನ್ನು ಮದುವೆಯಾಗಲು ಸಿದ್ಧನಿದ್ದಾಗ ಅಂದಿನ ಸಮಾಜದ ಅನಿಷ್ಠ ಭಾವನೆಗಳ ಪ್ರತೀಕದಂತಿದ್ದ ಹುಡುಗಿಯ ಮನೆಯವರು - 'ನೀನು ಮನೆಯಲ್ಲಿ ಹೇಗೆಯೆ ಇರು, ಹೊರಗೆ ಯಾರ ಹಿಂದಾದರೂ ಓಡಾಡಿದರೆ ನಮ್ಮ ಗತಿಯೇನು ' ಎಂದು ಅವಳ ಪುನರ್ವಿವಾಹಕ್ಕೆ ಒಪ್ಪದೆ

ಬಲವಂತದಿಂದ ಕರೆದೊಯ್ದು ಮನೆಯಲ್ಲಿ ಕೂಡಾಕಿದರು. ಆಕೆ ಮಾತ್ರ ಕೊರಗಿನಿಂದ ನಾಲ್ಕಾರು ತಿಂಗಳಲ್ಲಿಯೇ ತೀರಿಕೊಂಡಳು. ಈ ರೀತಿಯ ಅನೇಕ ಪರಿಣಾಮಗಳನ್ನು ಕಂಡು ಮನನೊಂದ ಮಾನವೀಯತೆಯ ಕಾರಂತರು ಬಾಲ ವಿಧವೆಯರ ವಿವಾಹ ಮಾಡಿಸಿಕೊಡಲು ತುಂಬಾ ಪ್ರಯತ್ನಗಳನ್ನು ಮಾಡಿದರು.

ಅಂದಿನ ಸಮಾಜದಲ್ಲಿದ್ದ ನಂಬಿಕೆಗಳು, ಸಂಪ್ರದಾಯಗಳು ಅವರ ಆಚಾರ -ವಿಚಾರಗಳು ಇವೆಲ್ಲವುಗಳಲ್ಲಿನ ಲೋಪ -ದೋಷಗಳ ವಿರುದ್ಧ ಕಾರಂತರು ಸಂಘರ್ಷವನ್ನು ನಡೆಸುತ್ತಲೇ ಬಂದವರು.

## ಗ್ರಾಮೋದ್ಧಾರ :

'ಹಳ್ಳಿಗಳು ಉದ್ಧಾರವಾಗದ ಹೊರತು ದೇಶ ಉದ್ಧಾರವಾಗುವುದಿಲ್ಲ' - ಎಂಬ ಗಾಂಧೀಜಿಯವರ ತತ್ವದಲ್ಲಿ ನಂಬಿಕೆಯಿಟ್ಟಿದ್ದ ಕಾರಂತರು ಗ್ರಾಮಗಳಲ್ಲಿ ರಾಷ್ಟ್ರೀಯ ಸೇವಾ ಮನೋಭಾವದ ಶಿಬಿರಗಳು, ಶ್ರಮದಾನ ಶಿಬಿರಗಳು, ಶಾಂತಿ ಶಿಬಿರಗಳ ಮೂಲಕ ಜಾಗೃತಿಯನ್ನು, ಸುಧಾರಣೆಯನ್ನು ಮೂಡಿಸಿದರು. ಒಂದು ಗ್ರಾಮದಲ್ಲಿ ನೆಲೆಸಿ ಗ್ರಾಮದ ಜನರಿಗೂ ಮತ್ತು ಶಿಬಿರದ ನಿವಾಸಿಗಳಿಗೂ ವಿವಿಧ ವಿಷಯಗಳಲ್ಲಿ ಶಿಕ್ಷಣ ಕೊಡುವುದು ಈ ಶಿಬಿರಗಳ ಉದ್ದೇಶವಾಗಿತ್ತು. ಆಗಲೂ ಗಾಂಧಿ ತತ್ವಗಳನ್ನೇ ತಲೆಯಲ್ಲಿ ತುಂಬಿಕೊಂಡಿದ್ದ ಕಾರಂತರು ಕಾರ್ಯಗತಗೊಳಿಸಿ ಸಮಾಜ ಸುಧಾರಣೆ ಮಾಡುವ ನಿಟ್ಟಿನಲ್ಲಿ ಶ್ರಮಿಸಿದರು.

ಶಿಬಿರದಲ್ಲಿ ಬೆಳಗಿನ ನಾಲ್ಕು ಗಂಟೆಗೇ ಎದ್ದು , ಸಬರಮತಿ ಆಶ್ರಮದ ಮಾದರಿಯಲ್ಲಿಯೇ ಒಂದು ತಾಸಿನ ಪ್ರಾರ್ಥನೆ, ಅನಂತರ ವ್ಯಾಯಾಮ, ಬಳಿಕ ಶಿಬಿರ ನಿವಾಸಿಗಳು ಉಪಹಾರ ಮುಗಿಸಿ ಹಾರೆ, ಗುದ್ದಲಿಗಳನ್ನು ಹಿಡಿದು ಬಾವಿಗಳನ್ನು ಚೊಕ್ಕ ಮಾಡುವುದಕ್ಕೊ, ಕೆಲವು ಬೋರ್‌ವೆಲ್ ಪಾಯಿಖಾನೆಗಳನ್ನು ಅಗೆಯುವುದಕ್ಕೊ ಹೋಗುತ್ತಾರೆ. ಸಂಜೆಯೂ ಅಂತಹದೇ ಕೆಲಸ. ಮಧ್ಯಾಹ್ನ ಒಂದು ಘಂಟೆಯ ಕಾಲ ಶಿಬಿರ ನಿವಾಸಿಗಳಿಗೆ ವಿವಿಧ ವಿಷಯಗಳ ಮೇಲೆ ಉಪನ್ಯಾಸಗಳ ಏರ್ಪಾಡು, ಸಂಜೆ ಊರವರ ಸಲುವಾಗಿ ಏನಾದರೊಂದು ವಿನೋದದ ಜೊತೆಗೆ, ತಿರುಗಿ ಉಪನ್ಯಾಸ ಸೂರ್ಯಾಸ್ತಕ್ಕೆ ಸರಿಯಾಗಿ ಊಟ, ಪ್ರಾರ್ಥನೆ, ಈ ರೀತಿ ದಿನದ ಕಾರ್ಯಕ್ರಮಗಳಿರುತ್ತಿದ್ದವು. ಊಟ, ಉಪಚಾರಗಳೆಲ್ಲ ಗಾಂಧೀಮರ್ಜಿಯವೆ - ಈ ರೀತಿಯಾದ ದಿನಚರಿಯು ಇಂದು ನಡೆಯುವ ರಾಷ್ಟ್ರೀಯ ಸೇವಾ ಯೋಜನೆಗಳ ದೈನಂದಿನ ಕಾರ್ಯಕ್ರಮಗಳಿಗೆ ಮಾದರಿಯಾದಂತಹವು.

ಪುತ್ತೂರಿನ ಶಾಂತಿಗೋಡು ಗ್ರಾಮದಲ್ಲಿ ಹತ್ತು ದಿನಗಳ ಕಾಲವಿದ್ದು, ಅಲ್ಲಿನ ಆರ್ಥಿಕ ಜೀವನವನ್ನು ಪರಿಶೀಲಿಸಿದರು. ಊರಕೇರಿಯ ಕೊಳಚೆಯನ್ನು ಹೊತ್ತು ಸಾಗಿಸಿದರು. ಸಂತೆ

ಮಾಳುಗಳನ್ನು ನಿರ್ಮಿಸಿದರು. ಏಳು ಗ್ರಾಮ ಕೇಂದ್ರಗಳಲ್ಲಿ ಕೈಗಾರಿಕೆ, ಕೃಷಿ, ಹೈನುಗಾರಿಕೆ, ಕೋಳಿ ಸಾಕಾಣೆ.... ಮುಂತಾದವುಗಳ ಬಗೆಗೆ ವೈಚಾರಿಕ ಉಪನ್ಯಾಸಗಳನ್ನು ನೀಡಿದರು. ಹುಡುಗರನ್ನು ಸಮಾಜ ಸೇವೆಗೆ ತರಬೇತುಗೊಳಿಸಿದರು.

ಗ್ರಾಮಗಳಲ್ಲಿ ಜಾಗೃತಿಯನ್ನು ಮೂಡಿಸುವ ಸಲುವಾಗಿ ಉಪನ್ಯಾಸ, ಚಲನಚಿತ್ರ, ನಾಟಕ ಪ್ರದರ್ಶನ ಮುಂತಾದ ಮನೋರಂಜನಾ ಕಾರ್ಯಕ್ರಮಗಳು, ಹಣ್ಣಿನ ಗಿಡ, ತರಕಾರಿ ಬೀಜಗಳ ಹಂಚುವ ಮುಂತಾದ ಹಲವಾರು ರೀತಿಯ ಮಾರ್ಗೋಪಾಯಗಳನ್ನು ಅವಲಂಬಿಸಿದರು. ಆಲಸ್ಯ, ಹೊಣೆಗೇಡಿತನ, ಸೋಮಾರಿತನಗಳಿಂದ ಕೂಡಿದ್ದ ಗ್ರಾಮಸ್ಥರಿಂದ ಕಾರಂತರ ಆರೋಗ್ಯ ಪರವಾದ ಪ್ರಚಾರ, ಸುಧಾರಿತ ಕೃಷಿ, ಸ್ವಾವಲಂಬನೆ ಮುಂತಾದ ವಿಚಾರಗಳಿಗೆ ಪ್ರೋತ್ಸಾಹ ಸಿಗದೆ ಇರುವುದನ್ನು ಗಮನಿಸಬಹುದಾಗಿದೆ. ಆದರೂ ಕಾರಂತರು ಇವುಗಳಿಂದ ಹೆಚ್ಚಿನದಾದ ಅನುಭವವನ್ನು ಪಡೆಯುವಂತಾಯಿತು. ಗ್ರಾಮೀಣ ಬದುಕಿನ ಪರಿಚಯ ಹೆಚ್ಚಿನ ರೀತಿಯಲ್ಲಿ ಅವರಿಗಾಯಿತು. ಮನುಷ್ಯರ ಸಂಕುಚಿತ ಪ್ರವೃತ್ತಿ, ಸಂಶಯ, ಕುತ್ಸಿತ ಮನೋಭಾವಗಳ ಸಮೀಪದ ನೋಟಗಳು ಅವರಿಗೆ ದೊರಕಿದವು. ಅವರ ಮುಂದಿನ ಪ್ರಯೋಗಾತ್ಮಕವಾದ ದೃಷ್ಟಿಕೋನಗಳಿಗೆ ಇವೆಲ್ಲವೂ ಸಹಕಾರಿಯಾದವೆಂದೇ ಹೇಳಬಹುದು. ಕಾರಂತರು ಒಬ್ಬ ಉನ್ನತ ರಾಜಕಾರಣಿಯಾಗಿದ್ದರೆ ಇವೆಲ್ಲದರ ಅನುಭವವಿದ್ದ ಅವರಿಂದ ಗ್ರಾಮೋದ್ಧಾರಗಳಲ್ಲಿ ಹೆಚ್ಚಿನ ಪ್ರಗತಿಯನ್ನು ನಾವು ನಿರೀಕ್ಷಿಸಬಹುದಾಗಿತ್ತೇನೋ ? ಆದರೆ ಅದು ಸಾಧ್ಯವಾಗದೆ ಹೋದುದು ನಮ್ಮ ದುರಂತ.

ಮದ್ಯಪಾನ ನಿಷೇಧ :

ಮದ್ಯಪಾನದಿಂದಾಗಿ ವೈಯಕ್ತಿಕವಾಗಿ, ಕೌಟುಂಬಿಕವಾಗಿ ಹಾಗೂ ಸಾಮಾಜಿಕವಾಗಿ ಉಂಟಾಗುತ್ತಿದ್ದ ದುಷ್ಪರಿಣಾಮಗಳನ್ನು, ಆರ್ಥಿಕ ಅಭದ್ರತೆಯನ್ನು ಮನಗಂಡ ಕಾರಂತರು ಗ್ರಾಮಗಳಲ್ಲಿ ಸೇಂದಿ ಹರಾಜಾಗದಂತೆ ಪ್ರಚಾರ ನಡೆಸಿದರು.

ಜನರಿಂದ ಹಲವಾರು ಮಾಹಿತಿ ಸಂಗ್ರಹಿಸಬೇಕೆಂದು ಬೇಸಾಯದ ವಿಚಾರದಲ್ಲಿ, ವಿನೋದ ವಿಲಾಸಗಳ ವಿಚಾರದಲ್ಲಿ, ಉಪವೃತ್ತಿ, ವಿದ್ಯಾಭ್ಯಾಸ, ಆರ್ಥಿಕ ಸ್ಥಿತಿ, ಆರೋಗ್ಯ ಎಲ್ಲದಕ್ಕೂ ಸಂಬಂಧಿಸಿದಂಥ ಪ್ರಶ್ನಾವಳಿಯನ್ನು ತಯಾರಿಸಿ ಊರೂರು ಪ್ರತಿಯೊಂದು ಕೋಮಿನವರ ಮನೆಗಳನ್ನು ಹೊಕ್ಕು ಗ್ರಾಮೀಣ ಜನರ ಜೀವನ ಬಗೆಯನ್ನು ತಿಳಿದುಕೊಂಡರು. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಆಗಬೇಕಾಗಿರುವ ಸುಧಾರಣೆಗಳನ್ನು ಕಾರ್ಯಗತಗೊಳಿಸಲು ಪ್ರಯತ್ನಿಸಿದರು.

ಹಳ್ಳಿಗಳಲ್ಲಿ ಹೆಚ್ಚಾಗಿ ಅವಿದ್ಯಾವಂತರೆ ಮದ್ಯಪಾನದಂತಹ ದುಶ್ಚಟಗಳಿಗೆ ಒಳಗಾಗಿದ್ದರು. ಅವರಿಗೆ ಕೇವಲ ಉಪನ್ಯಾಸದಂತಹ ಕಾರ್ಯಕ್ರಮಗಳಿಂದ ತಿಳುವಳಿಕೆ ಮೂಡಿಸಲು ಸಾಧ್ಯವಿಲ್ಲವೆಂದು ತಿಳಿದ ಕಾರಂತರು ನಾಟಕಗಳ ಮೂಲಕ ಜಾಗೃತಿ ಮೂಡಿಸಲು ಪ್ರಯತ್ನಿಸಿದರು. ಅಂದಿನ ಪ್ರಸಿದ್ಧ ಮರಾಠಿ ನಾಟಕ ಏಕಚ್ ಪ್ಯಾಲಾವನ್ನು ಮಿತ್ರರ ನೆರವಿನಿಂದ ಕನ್ನಡಕ್ಕೆ ಅನುವಾದಿಸಿದ್ದಲ್ಲದೆ, ಸ್ವಲ್ಪ ರೂಪಾಂತರಗಳನ್ನು ಮಾಡಿ 'ನಿಷಾ ಮಹಿಮೆ ' ಎಂದು ಹೆಸರಿಸಿ, ಸ್ವತಃ ನಿರ್ದೇಶನ, ನಟನೆಗಳಿಂದ ಸ್ನೇಹಿತರನ್ನೂ ಸೇರಿಸಿಕೊಂಡು ಈ ನಾಟಕವನ್ನು ದಕ್ಷಿಣ ಕನ್ನಡ ಜಿಲ್ಲೆಯ ಹಲವಾರು ಹಳ್ಳಿಗಳಲ್ಲಿ ಪ್ರದರ್ಶಿಸಿದರು. ಮದ್ಯಪಾನದ ಕೆಡಕುಗಳನ್ನು ಜನರಿಗೆ ತಿಳಿಸುವ ಇಂತಹ ಅವರ ಪ್ರಯತ್ನಗಳಲ್ಲಿ ಅಂದಿನ ಬಂಡವಾಳಶಾಹಿಗಳ ಪ್ರತಿರೋಧಗಳನ್ನು ಅವರು ಎದುರಿಸದೆ ಇರಲಾರರು ಎಂದೆನಿಸುತ್ತದೆ. ಆದರೂ ಅವೆಲ್ಲವನ್ನು ಎದುರಿಸಿ ಹಳ್ಳಿಯ ಜನತೆಯ ಅಶಿಕ್ಷಿತ ಪ್ರಪಂಚವನ್ನು ತಿದ್ದುವಲ್ಲಿನ ಪ್ರಯತ್ನಗಳು ಅವರ ತಾಳ್ಮೆ, ಕಾರ್ಯಕ್ಷಮತೆಗಳೆರಡಕ್ಕೂ ಸವಾಲುಗಳೇ ಆಗಿದ್ದವು.

ಅಸ್ಪೃಶ್ಯತಾ ನಿವಾರಣೆ / ಮೂಢನಂಬಿಕೆಗಳ ವಿರುದ್ಧ ಜಾಗೃತಿ :

ಗ್ರಾಮಗಳನ್ನು , ಅಲ್ಲಿನ ಅಸಮಾನತೆಯ ಸಮುದಾಯಗಳನ್ನು ಕಂಡ ಕಾರಂತರು ಸಮಾನತೆಗಾಗಿ, ಅಸ್ಪೃಶ್ಯತಾ ನಿವಾರಣೆಗಾಗಿಯೂ ಅಂದಿನ ವ್ಯವಸ್ಥೆಗೆ ಮುಖಾಮುಖಿಯಾದವರು. ಅನೇಕ ಹಳ್ಳಿಗಳಲ್ಲಿ ಹಲವಾರು ಹೊಲೆಯರ ಮನೆಗಳಿಗೆ ಕುಡಿಯಲೂ ನೀರಿಲ್ಲದಿದ್ದ ಸಂದರ್ಭಗಳಲ್ಲಿ ಬಾವಿಗಳನ್ನು ತೋಡಿಸಲು ಪ್ರಯತ್ನಪಟ್ಟರು. ಕೆಲವಾರು ರೈತರು ಸುಧಾರಿತ ಬೇಸಾಯದಿಂದ ಹೆಚ್ಚಿನ ಇಳುವರಿಯನ್ನು ಪಡೆದರೆ ಇನ್ನುಳಿದವರು 'ಅವರ ಅದೃಷ್ಟದಲ್ಲಿ ಬರೆದಿದೆಯೆಂದೂ, ನಮ್ಮ ಅದೃಷ್ಟಕ್ಕೆ ಒಳ್ಳೆಯ ಬೆಳೆ ಬಾರದು ' ಎಂಬ ಮೂಢನಂಬಿಕೆಯಿಂದ ಕೂಡಿದ್ದರು. ಅಂತಹ ಸಂದರ್ಭಗಳಲ್ಲಿ ಸಮಾಜ ಸುಧಾರಕ ಶಿವರಾಯರ ಜೊತೆಗೂಡಿ ಸುಧಾರಿತ ಗೊಬ್ಬರ ಮತ್ತು ಬೇಸಾಯಗಳ ವಿಚಾರವಾಗಿ ಉಪನ್ಯಾಸಗಳನ್ನು ಏರ್ಪಡಿಸಿ ಅವರಲ್ಲಿನ ಅಜ್ಞಾನವನ್ನು ಹೋಗಲಾಡಿಸಲು ಪ್ರಯತ್ನಿಸಿದರೆ ಅಂಥ ಸಂದರ್ಭದಲ್ಲೂ ಸಮಾಜದ ಪ್ರತಿಕ್ರಿಯೆಗಳು ವಿರುದ್ಧ ಮುಖಿಯಾಗಿದ್ದವು - 'ಇದು ಇವರು ನಮ್ಮ ಪಾಲಿಗೆ ತೆಗೆಯುವ ಹೊಂಡ ', 'ಇದರಲ್ಲಿ ಶಿವರಾಯರಿಗೂ, ಇವರಿಗೂ ಏನೋ ಲಾಭವಿರಬೇಕು. ಗೊಬ್ಬರದ ಕಂಪನಿಯ ಏಜೆನ್ಸಿ ಇದೆಯೋ ಏನೋ' ಎಂದು ಕುಹಕವಾಡುತ್ತಿದ್ದರು. ಇಂತಹ ಮೂಢನಂಬಿಕೆಗಳಿಂದ ಕೂಡಿದ್ದ ಗ್ರಾಮಗಳಲ್ಲಿ 'ತ್ಯಾಂಪಣ್ಣನ ಹಣೆಬರಹ' ಮುಂತಾದ ಬೀದಿನಾಟಕಗಳ ಮೂಲಕ ಜಾಗೃತಿ ಮೂಡಿಸಿದರು.

ಕಾರಂತರು ಧರ್ಮಸ್ಥಳದ ಗುಡಿಯನ್ನು ಹೊಕ್ಕು ಹೊರಗೆ ಬರುವಾಗ (ರಾಘವನ ಸೋದರರು )ಸ್ನೇಹಿತರು ಹೊರಗೇ ನಿಂತಿದ್ದರು. ಏಕೆಂದು ವಿಚಾರಿಸಿದರೆ - ಅಲ್ಲಿ ಹರಿಜನರಿಗೂ,

ವೇಶ್ಯಾಕುಲದವರಿಗೂ ಒಲಗೆ ಪ್ರವೇಶವಿಲ್ಲವೆಂಬುದು ತಿಳಿದು ವ್ಯಥೆಯಿಂದ ಊಟಕ್ಕೂ ನಿಲ್ಲದೆ ಮೂರು ಹರದಾರಿ ನಡೆದು ಬೆಳ್ತಂಗಡಿ ಊರಿಗೆ ಬಂದರು. ಅನಂತರ ಎಲ್ಲರಿಗೂ ತೆರೆಯದಿರುವ ದೇವಾಲಯಗಳನ್ನು ಪ್ರವೇಶಿಸುವುದದನ್ನೇ ಬಿಟ್ಟುಬಿಟ್ಟರು.

ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದರೂ ಅದೆಲ್ಲವನ್ನು ತೊರೆದು ಲೀಲಾ ಎಂಬಾಕೆಯನ್ನು ಅಂದಿನ ಕಾಲಕ್ಕೇ ಅಂತರ್ಜಾತಿ ವಿವಾಹ ಮಾಡಿಕೊಂಡು ಸಾಮಾಜಿಕ ಸುಧಾರಣೆಗಳಲ್ಲಿ ಸ್ವತಃ ಮಾದರಿಯಾದರು.

ವೇಶ್ಯೆಯರ ಸಮಸ್ಯೆ :

ಇಂದಿಗೂ ಸಾಮಾಜಿಕವಾಗಿ ಸಮಸ್ಯೆಯಾಗಿಯೇ ಬೆಳೆಯುತ್ತಿರುವ ವೇಶ್ಯಾ ಸಮಸ್ಯೆಯು ಬಹಳ ಹಿಂದಿನಿಂದಲೂ ವಿವಿಧ ರೀತಿಗಳಲ್ಲಿ ಬೆಳೆದು ಬಂದುದಾಗಿದೆ. ಕಾರಂತರ ಊರಿನ ದೊಡ್ಡ ಮದುವೆಗಳಲ್ಲಿ ,ವೇಶ್ಯೆಯರನ್ನು ಕರೆಯಿಸಿ, ನರ್ತನವನ್ನು ಮಾಡಿಸುವ ರೂಢಿಯಿತ್ತು. ಇದನ್ನು ಕಂಡ ಸಾಮಾಜಿಕ ಕಳಕಳಿಯ ಕಾರಂತರು ಪ್ರಚಾರವನ್ನು ಮಾಡಿ ನರ್ತನ ಪದ್ಧತಿಯನ್ನು ನಿಲ್ಲಿಸಿದರು. ಆ ಪ್ರದೇಶದ ಸುತ್ತಮುತ್ತಲಿನ ಊರುಗಳಲ್ಲಿ ಗೆಜ್ಜೆ ಕಟ್ಟುವ ಮನೆತನಗಳು ಕೆಲವಿದ್ದವು. ಆ ದಿನಗಳಲ್ಲಿ ಅವರು ಮಾರಾಟಕ್ಕಿರಿಸಿದ ವಸ್ತುಗಳಾಗಿದ್ದರು. ಇಂತಹವರಲ್ಲಿ ಗೆಜ್ಜೆ ಕಟ್ಟುವ ಪ್ರಾಯ ಬಂದ ಯುವತಿಯರಿಗೆ ಯಾವನಾದರೊಬ್ಬ ಶ್ರೀಮಂತನು ಹಣಕೊಟ್ಟು ಪ್ರಸ್ತ ನಡೆಯಿಸುತ್ತಾನೆ. ಮುಂದೆ ಆಕೆ ಅವನವಳು, ಈತ ನಡೆಯಿಸಿಕೊಂಡು ಹೋಗುವಷ್ಟು ದಿನ ಆಕೆ ಅವರ ಪ್ರೇಯಸಿ. ಈ ಹಾದಿ ಬಿಟ್ಟವರನ್ನು 'ಬಿಡುಸೂಳೆ 'ಯರೆಂದು ಊರುಗಳಲ್ಲಿ ಕರೆಯುತ್ತಿದ್ದರು. ಇಂತಹವರನ್ನು ಕಂಡ ಕಾರಂತರು ಸುಮ್ಮನಿರಲಿಲ್ಲ. ಅದರ ಸುಧಾರಣೆಯಲ್ಲಿ ಮನೆಯವರನ್ನು ಒಪ್ಪಿಸಿ ವಿವಾಹ ಮಾಡಿಸಿ ಅವರ ಬದುಕನ್ನು ಎಲ್ಲರ ಬದುಕಿನಂತಾಗಿಸಲು 'ವರ ' ಅನ್ವೇಷನೆಯಲ್ಲಿ ತೊಡಗಿದರು. ಗಾಂಧಿ ೀಜಿಯವರಿಗೆ ಪತ್ರವನ್ನು ಬರೆದರು. ಆದರೆ ಗಾಂಧೀಜಿಯವರು - 'ಅಂಥ ಹುಡುಗಿಯರು ಯಾವಜ್ಜೀವ ಬ್ರಹ್ಮಚರ್ಯೆ ನಡೆಯಿಸಲಿ ' ಎಂದು ಚಿಕಿತ್ಸೆ ಹೇಳಿದರು. ಮನುಷ್ಯ ಸ್ವಭಾವದ ಪರಿಚಯವೇ ಗಾಂಧೀಜಿಗಿಲ್ಲ ! ತಾವು ಮಾಡಿದ್ದು ಎಲ್ಲರಿಂದಲೂ ಆಗುತ್ತದೆ ಎಂದು ತಿಳಿದುಕೊಂಡಿದ್ದಾರೆ ' ಎಂದು ತೀರ ಬೇಸರಪಟ್ಟರು ಕಾರಂತರು. ಈ ರೀತಿಯಾಗಿ ಹುಡುಗಿಯರನ್ನು ಲಗ್ನ ಮಾಡಿಸಿಕೊಟ್ಟುದಕ್ಕಾಗಿ ಮಿತ್ರರು 'ದಲಾಲಿ ' ಎಂದು ಮೂದಲಿಸಿದರು. ಈ ಕೆಲಸಗಳ ದೆಸೆಯಿಂದ ಸ್ವಾಭಾವಿಕವಾಗಿ ಕಾರಂತರಿಗೆ ಅಂದು ಅಪಕೀರ್ತಿಯೂ ಬಂದಿತು. ಸಮಾಜ ಸುಧಾರಣೆಯ ಮನೋಭಾವದ ಕಾರಂತರು ಅದನ್ನು ಲೆಕ್ಕಿಸದೆ ಇನ್ನೂ ಕ್ರಿಯಾಶೀಲರಾದರು.

" ಕಾರಂತರ ಜೀವನವು ಅನೇಕಮುಖವಾಗಿ ಪ್ರವಹಿಸಿದೆ. ಅವರಂತೆ ವಿಧವಿಧವಾದ ಪ್ರತಿಭೆಯುಳ್ಳವರು ಕನ್ನಡ ಸಾಹಿತಿಗಳಲ್ಲಿ ಬೇರೆ ಯಾರೂ ಇಲ್ಲ. ಬರವಣಿಗೆ ಅವರ

ಜೀವನದ ಎಷ್ಟು ದೊಡ್ಡ ಭಾಗವೆಂದಿಟ್ಟುಕೊಂಡರೂ ಅದು ಅವರ ಹಲವು ಚಟುವಟಿಕೆಗಳಲ್ಲಿ ಒಂದೆಂಬುದನ್ನು ನಾವು ಮರೆಯುವ ಹಾಗಿಲ್ಲ. ಅವರ ಮನಸ್ಸೇ ಹಾಗೆ - ತೀಕ್ಷ್ಣ, ಅವಿಶ್ರಾಂತ, ಬಹುಪ್ರವೃತ್ತ, ಅತೃಪ್ತ, ಯಾವ ಒಂದೇ ವಿಷಯದಲ್ಲಿಯೂ ಬಹುಕಾಲ ಸ್ಥಿರವಾಗಿ ನಿಲ್ಲದು. ಒಂದು ಕೆಲಸದಿಂದ ಇನ್ನೊಂದಕ್ಕೆ, ಒಂದು ಬಗೆಯಿಂದ ಮತ್ತೊಂದಕ್ಕೆ ಒಂದು ಸಾಹಿತ್ಯ ಪ್ರಕಾರದಿಂದ ಇನ್ನೊಂದರ ಬೆಳಸಿಗೆ ಜಗಿಯುವ ಅವರ ಈ ಪ್ರವೃತ್ತಿಯನ್ನು ಕಂಡಾಗ ಸ್ಥಿರ ಬುದ್ಧಿಯೇ ಇವರಿಗಿಲ್ಲವೋ ಅನಿಸುತ್ತದೆ - ಆಳವಾಗಿ ವಿಚಾರಿಸಿದವರಿಗೆ ''[೨]

ವಿಫುಲವಾದ ಬರವಣಿಗೆಯ ರಾಶಿಯನ್ನು ನೀಡಿರುವ ಕಾರಂತರ ಜೀವನದಲ್ಲಿ ಅದು ಎಷ್ಟೇ ದೊಡ್ಡ ಭಾಗವಾದರೂ ಅದು ಅವರ ಸಾಮಾಜಿಕ ಚಟುವಟಿಕೆಗಳಲ್ಲಿ ಒಂದು ಎಂದು ನಿತ್ಯ ನಿರಂತರವಾದ ಅವರ ಕಾರ್ಯವೈಖರಿಯನ್ನು ತಿಳಿಸಿಕೊಡುವ ಅವರ ಆಪ್ತರಾದ ವಿ.ಸೀತಾರಾಮಯ್ಯನವರ ಮೇಲಿನ ಮಾತುಗಳು ಮೌಲಿಕವಾದವು. ಕಾರಂತರು ಯಾವುದೋ ಒಂದು ಕಾರ್ಯಕ್ಕೆ ಅಂಟಿ ಕುಳಿತವರಲ್ಲ. ಹಲವಾರು ರೀತಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡವರು. ಬೇರೆ ಸಾಹಿತಿಗಳಿಗಿಂತ ವಿಭಿನ್ನ ವ್ಯಕ್ತಿತ್ವವನ್ನು ಹೊಂದಿರುವವರಂತೆ ಗೋಚರಿಸಲು ಅವರ ಈ ಸಾಮಾಜಿಕ ಚಟುವಟಿಕೆಗಳು ಪ್ರಮುಖವಾದವುಗಳಾಗಿವೆ.

ಮನುಷ್ಯ ಹುಟ್ಟುವಾಗಲೇ ತನ್ನ ಸಮಾಜದ ಅಂಗವಾಗಿ ಹುಟ್ಟುತ್ತಾನೆ. ಅದು ಅನೇಕರ ಪಾಲಿಗೆ ಹುಟ್ಟಿನಿಂದ ಸಾಯುವವರೆಗೂ ಬೆಳವಣಿಗೆಯನ್ನು ಕಾಣುವ ಆವರಣವು ಒಂದು ನಿರ್ದಿಷ್ಟವಾದ ಪ್ರದೇಶಕ್ಕೆ ಸೀಮಿತವಾಗಿದ್ದು, ಅವರು ಆ ಆವರಣದಲ್ಲಿನ ಸಮಾಜದ ನಂಬಿಕೆ, ನಡವಳಿಕೆಗಳ ಪ್ರಭಾವವನ್ನು ಪಡೆದು, ಅದೇ ಆವರಣದಲ್ಲಿಯೇ ಕೊನೆಗೊಳ್ಳಬಹುದು. ಆದರೆ, ಅದಕ್ಕೆ ವ್ಯತಿರಿಕ್ತವಾದ ವ್ಯಕ್ತಿತ್ವವನ್ನು ಹೊಂದಿದ ವ್ಯಕ್ತಿಗಳು ಇಲ್ಲದಿಲ್ಲ. ಅಂತಹ ಅಪರೂಪದ ವ್ಯಕ್ತಿಗಳ ಸಾಲಿಗೆ ಸೇರುವವರು ಕಾರಂತರು. ತಾವು ಹುಟ್ಟಿದ ಆವರಣವನ್ನು ದಾಟಿ ಸಮಾಜ ಮುಖಿಯಾಗಿ ಬೆಳೆದ ಕಾರಂತರು ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅಂತಹ ಸಂದರ್ಭದಲ್ಲಿ ಅವರು ಎದುರಿಸಿದ ಸಂಘರ್ಷಾತ್ಮಕ ನೆಲೆಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಗು ಮಾಡಿಕೊಂಡಿದ್ದೇನೆ. ಅವರ 'ಸ್ಮೃತಿ ಪಟಲದಿಂದ ಸಂಪುಟ -೩' ರಲ್ಲಿ - 'ಸಮಾಜ ಮತ್ತು ನಾನು' ಎಂಬ ಅಧ್ಯಾಯ ಈ ವಿಚಾರಗಳನ್ನು ಇನ್ನಷ್ಟು ಪುಷ್ಟೀಕರಿಸುತ್ತವೆ.

ಹೀಗೆ ರಾಜಕೀಯವಾದ, ಸಾಮಾಜಿಕವಾದ ಕ್ಷೇತ್ರಗಳಲ್ಲಿ ತಮ್ಮದೇ ಆದ ಪ್ರತಿಸ್ಪಂದನಗಳನ್ನು ತೋರಿಸುತ್ತಾ ಬಂದ ಕಾರಂತರು ಹಾಗೆಯೇ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ಪ್ರಯೋಗಗಳನ್ನು ನಡೆಸಿದವರು. ಅವುಗಳಲ್ಲಿ ಅವರಿಗೆ ಅತಿ ಹೆಚ್ಚು ಜನಮನ್ನಣೆಯನ್ನು ತಂದುಕೊಟ್ಟಂತಹುದು ಅವರ ವಿಫುಲವಾದ ಸಾಹಿತ್ಯ. ಸಾಹಿತ್ಯದ ಮುಖಾಂತರ ಅವರ ಸಾಂಸ್ಕೃತಿಕವಾದ ಪ್ರತಿರೋಧಗಳು ಎಂತಹವು? ಯಾವ ರೀತಿಯವು? ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಿದ್ದೇನೆ.

## ಅಡಿ ಟಿಪ್ಪಣಿಗಳು :

೧. ಈಶ್ವರ ದೈತೋಟ, ಕಾರಂತ ಕಿರಣ, ('ಪತ್ರಿಕೋದ್ಯಮ, ರಾಜಕಾರಣ, ಸಾಮಾಜಿಕ ಚಟುವಟಿಕೆಗಳಲ್ಲಿ ಶಿವರಾಮ ಕಾರಂತರು, ಬಗೆಗಿನ ಲೇಖನ) ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ , ಬೆಂಗಳೂರು - ೨೦೦೪, ಪುಟ-೧೭.

೨. ಸೀತಾರಾಮಯ್ಯ ವಿ. ; 'ಶಿವರಾಮ ಕಾರಂತ ' ನವೋದಯ ಪ್ರಚಾರ ಪುಸ್ತಕ ಮಾಲೆ -೪, ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ, ೧೯೩೬, ಪುಟ -೧೧,೧೨.

## ಅಧ್ಯಾಯ - ೪

# ಸಾಹಿತ್ಯದ ಮುಖಾಂತರ ಕಾರಂತರ ಸಾಂಸ್ಕೃತಿಕ ಪ್ರತಿರೋಧಗಳು

" ಸಾಹಿತ್ಯ ರಾಜ್ಯದ ವಿಹಾರವಾಗಲೀ, ಕಲಾ ರಾಜ್ಯದ ವಿಹಾರವಾಗಲೀ, ಕನಸಿನ ಕಡಲಿನಲ್ಲಿ ನೌಕೆಯಲ್ಲಿ ಕುಳಿತು ತೇಲಾಡುವ ಒಂದು ಆನಂದದ ಕೆಲಸ. ಆ ಸುಖ -ಶಾಂತಿಗಳು ಅಗಾಧವಾದವು. ಆದರೆ ಜನರು ತಿಳಿಯುವಂತೆ ಅದು ಬರಿಯ ಊಹೆಯ ರಾಜ್ಯವಲ್ಲ. ಬಾಳಿನ ಹಿನ್ನೆಲೆಯಲ್ಲಿ ಅದು ಬೆಳೆದು, ಅನುಭವದ ಆಹಾರವನ್ನುಂಡು, ಮನಸ್ಸು ಕುದಿದು ಉಂಟಾಗುವ ಪಾಕ. ಬಾಳನ್ನು ಮರೆತ ಕನಸುಗಳಾಗಲಿ, ಅನುಭವದ ಬೆನ್ನೆಲುಬಿಲ್ಲದ ಕಲ್ಪನೆಗಳಾಗಲಿ ತಾಳಿ, ಬಾಳಲಾರವು "

-ಶಿವರಾಮ ಕಾರಂತ

# ಸಾಹಿತ್ಯದ ಮುಖಾಂತರ ಕಾರಂತರ ಸಾಂಸ್ಕೃತಿಕ ಪ್ರತಿರೋಧಗಳು

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದ ಇಪ್ಪತ್ತನೆಯ ಶತಮಾನದಲ್ಲಿ ದೇಶವು ತೀವ್ರತರವಾದ ಸಾಂಸ್ಕೃತಿಕ ಸವಾಲುಗಳನ್ನು ಎದುರಿಸುವಂತದ್ದಾಗಿತ್ತು. ಇದು ದೇಶದ ಜನಸಾಮಾನ್ಯರು, ಚಿಂತಕರು, ರಾಜಕಾರಣಿಗಳು ಮಾತ್ರ ಎದುರಿಸಿದ ಪ್ರಶ್ನೆ , ಸವಾಲುಗಳಾಗಿರದೆ ದೇಶದಾದ್ಯಂತ ಎಲ್ಲಾ ಭಾಷಾ ಸಾಹಿತ್ಯ ಕ್ಷೇತ್ರದ ಸಾಹಿತಿಗಳೂ ಎದುರಿಸುವಂತಹ ಪರಿಸ್ಥಿತಿ ಎದುರಾಗಿತ್ತು.

ಕಾರಂತರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದ ಕಾಲ ನವೋದಯ ಸಾಹಿತ್ಯದ ಕಾಲಘಟ್ಟ, ರಾಷ್ಟ್ರೀಯ ಮನೋಭಾವದ ಹೊಸ ನಾಡನ್ನು ಕಟ್ಟುವ, ದೇಶವನ್ನು ಬಂಧಮುಕ್ತಗೊಳಿಸುವ 'ದೇಶಭಕ್ತಿ'ಯು ಅಂದಿನ ಬರಹಗಾರರ ಕಥಾವಸ್ತುಗಳಾಗಿದ್ದವು. ಇಂತಹ ಸಂದರ್ಭದಲ್ಲಿ ಚಿಂತಕರಾಗಿ, ಸೃಜನಶೀಲ ಸಾಹಿತಿಯಾಗಿ, ತಮ್ಮದೇ ಆದ ವಾಸ್ತವ ಧೋರಣೆಗಳಿಂದ 'ಸಾಹಿತ್ಯಕ್ಕೆ ಅನುಭವವೇ ಜನ್ಮಭೂಮಿ ' ಎಂದು ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ತೊಡಗಿಸಿಕೊಂಡು ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿಯಾದ 'ಜ್ಞಾನಪೀಠ ಪ್ರಶಸ್ತಿ'ಯ ಜೊತೆಗೆ ಹಲವಾರು ಶ್ರೇಷ್ಠ ಪ್ರಶಸ್ತಿಗಳನ್ನು ಪಡೆದವರು ಕಾರಂತರು.

ನವೋದಯ ಸಾಹಿತ್ಯದ ತಲೆಮಾರಿನ ಸಾಹಿತ್ಯ ಚಳುವಳಿಯಲ್ಲಿ ಕಾವ್ಯವನ್ನು ಉಳಿದೆಲ್ಲಾ ಸಾಹಿತ್ಯ ಪ್ರಕಾರಗಳಿಗಿಂತ ಮುಖ್ಯವೆಂದು, ಶ್ರೇಷ್ಠವಾದುದೆಂದು ತಿಳಿದಿದ್ದುಂಟು. ಕಾರಂತರೇ ಹೇಳಿಕೊಂಡಿರುವಂತೆ ಅಂದು ಕವಿಗಳಿಗೆ ಗದ್ಯ ಲೇಖಕರಿಗಿಂತ ಹೆಚ್ಚಿನ ಮನ್ನಣೆ ಇತ್ತು. ಆದರೂ ಕಾರಂತರು 'ರಾಷ್ಟ್ರಗೀತ ಸುಧಾಕರ ' ಮತ್ತು 'ನೀಳ್ಗವನಗಳು' ಎಂಬ ಎರಡು ಕವನ ಸಂಕಲನಗಳನ್ನು ಪ್ರಾರಂಭದಲ್ಲಿ ಪ್ರಕಟಿಸಿದ್ದರೂ ಕಾವ್ಯ ಲೋಕದಲ್ಲಿ ಅವರು ವಿಹರಿಸಲಿಲ್ಲ. ವಾಸ್ತವವಾದಿಯಾದ ಕಾರಂತರಿಗೆ ತಾವು ನೋಡದ ಹಾಗೂ ನೋಡಲು ಸಾಧ್ಯವಾಗದ ವಸ್ತು ವಿಷಯಗಳಿಗಿಂತ ತಮ್ಮ ಸುತ್ತಲಿನ ಸಮಾಜದ ಬದುಕಿನ ಬಗ್ಗೆ ಹೆಚ್ಚು ಆಸಕ್ತಿ ಇದ್ದುದು ಇದಕ್ಕೆ ಕಾರಣವಾಗಿರಬಹುದು. ಕಾರಂತರ ಇಂತಹ ವಾಸ್ತವ ಧೋರಣೆಯನ್ನು ಅಂದು ಅವರು ನಿರ್ವಹಿಸಿದ ಹೊಣೆಗಾರಿಕೆಯನ್ನು ಕುರಿತು ಪ್ರಮುಖ ವಿಮರ್ಶಕರಲ್ಲಿ ಒಬ್ಬರಾದ ಜಿ.ಎಚ್. ನಾಯಕ ಅವರು ಈ ಮುಂದಿನಂತೆ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

" ಬ್ರಿಟೀಷ್ ವಸಾಹತುಶಾಹಿಯ ಆಳ್ವಿಕೆ ಪ್ರಾರಂಭವಾದ ಮೇಲೆ ಭಾರತದಲ್ಲಿ ಸಂಸ್ಕೃತಿ ಪುನಾರಚನೆಯ ಮಹತ್ವಾಕಾಂಕ್ಷೆಯಿಂದ ಪ್ರೇರಿತವಾದ ಮಹಾನ್ ಚಿಂತಕರು ದೇಶದಾದ್ಯಂತ ಬಂದರು. ಅದರಲ್ಲಿಯೂ ಆಗಿನ ಬೆಂಗಾಲ್ ಪ್ರೆಸಿಡೆನ್ಸಿ , ಬಾಂಬೇ ಪ್ರೆಸಿಡೆನ್ಸಿಗಳಿಂದ ಅಂಥವರು ಹೆಚ್ಚಿನ ಸಂಖ್ಯೆಯಲ್ಲಿ ಬಂದರು. ಆದರೆ ಕರ್ನಾಟಕ ಅಥವಾ ಕನ್ನಡದವರಲ್ಲಿ ಅಂಥ ಸಂಸ್ಕೃತಿ ಚಿಂತಕರು ರಾಜಕೀಯ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಬರಲಿಲ್ಲ. ಕನ್ನಡ ನಾಡಿನಲ್ಲಿ ಸಾಹಿತಿಗಳೇ ಆ ಹೊಣೆಗಾರಿಕೆಯನ್ನು ಹೊತ್ತು ಸಾಗಿದರು. ಅಂಥವರಲ್ಲಿ ಅತ್ಯಂತ ಮುಖ್ಯರಾದವರಲ್ಲಿ ಕಾರಂತರೂ ಒಬ್ಬರು"[೧]

ಬ್ರಿಟೀಷರ ಅಧೀನದಲ್ಲಿದ್ದ ಭಾರತದ ಸಂದರ್ಭದಲ್ಲಿ ಸಂಸ್ಕೃತಿ ಪುನಾರಚನೆಯ ಕಾರ್ಯದ ಮಹಾನ್ ಚಿಂತಕರು ದೇಶದಾದ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡರೆ ಕನ್ನಡದಲ್ಲಿ ಅಂತಹ ಚಿಂತಕರ ಕೊರತೆ ಕಾಣುತ್ತಿತ್ತು. ಇಂತಹ ಸಂದರ್ಭದಲ್ಲಿ ಕನ್ನಡ ನಾಡಿನ ಸಾಹಿತಿಗಳೇ ಆ ಜವಾಬ್ದಾರಿಯನ್ನು ನಿರ್ವಹಿಸಿದರು. ಅಂತಹ ಸಾಹಿತಿಗಳಲ್ಲಿ ಕಾರಂತರು ಪ್ರಮುಖವಾಗಿ ನಿಲ್ಲುವವರು ಎಂದು ಕಾರಂತರು ಕೇವಲ ಒಬ್ಬ ಸಾಹಿತಿಯು ಮಾತ್ರವೇ ಆಗಿರದೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಸಹ ತಮ್ಮ ಚಿಂತನೆಗಳ ಛಾಪನ್ನು ಮೂಡಿಸಿದವರು. ಅದರಿಂದಾಗಿ ಅನೇಕ ಪ್ರತಿರೋಧಗಳನ್ನು ಎದುರಿಸಿದವರು ಎಂಬಂತಹ ಜಿ.ಎಚ್.ನಾಯಕ್‌ರ ಉದ್ಧರಣೆಯ ಮಾತುಗಳನ್ನು ಕಾರಂತರ ಆತ್ಮಕಥಾನಕಗಳನ್ನು ಗಮನಿಸಿದಾಗ ಹೆಚ್ಚು ಸ್ಪಷ್ಟವಾಗುತ್ತದೆ.

ನಾನೊಬ್ಬ ಪ್ರಸಿದ್ಧ ಸಾಹಿತಿ, ಪ್ರಸಿದ್ಧ ಲೇಖಕ ಅಥವಾ ಇನ್ನಾವುದೋ ರೀತಿಯ `ಮಹಾನ್ ವ್ಯಕ್ತಿ ಎಂಬ ಯಾವ ಹೆಮ್ಮೆಯನ್ನು ಇರಿಸಿಕೊಂಡಿರದ ಕಾರಂತರು ತಮ್ಮ ಕೃತಿಗಳನ್ನು ಸಂರಕ್ಷಿಸುವ ಬಗ್ಗೆ ಯಾವ ಕಾಳಜಿಯನ್ನು ವಹಿಸಲಿಲ್ಲ. ಇಂಥ ಅಸಾಧ್ಯವಾದ ಕೆಲಸವನ್ನು ಜಾಗರೂಕತೆಯಿಂದ ನಿರ್ವಹಿಸಿ ಅವರ ಸಾಹಿತ್ಯ ಪ್ರಚಾರದಲ್ಲಿ ಪ್ರಮುಖವಾದ ಪಾತ್ರ ವಹಿಸಿದ ಮಾಲಿನಿ ಮಲ್ಯ ಅವರ ಕಾರ್ಯವೈಖರಿ ಶ್ಲಾಘನೀಯವಾದುದು. ಮೊಗೆದಷ್ಟೂ ಮುಗಿಯದ ಗಣಿಯನ್ನು ಹೊಕ್ಕು ಕೈಗೆ ಸಿಕ್ಕಿದಷ್ಟನ್ನು ಬಾಚಿ ತಂದಿರುವೆನಾದರೂ ಆ ಕೆಲಸ ಇನ್ನೂ ಮುಗಿದಿಲ್ಲ ' ಎಂದು ಹೇಳುವ ಮಾಲಿನಿ ಮಲ್ಯ ಅವರ ಮಾತುಗಳಲ್ಲಿ ಕಾರಂತರ ಅಪಾರವಾದ ಸಾಹಿತ್ಯವನ್ನು ಗಮನಿಸಬಹುದಾಗಿದೆ.

ಕಾರಂತರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆಯನ್ನು, ಅಪಾರವಾದ ಅನುಭವವನ್ನು, ಅದನ್ನು ಅಳವಡಿಸಿಕೊಂಡ ರೀತಿಯನ್ನು ಕುರಿತು 'ಆಡಿದ ಮಾತಿನ ಲೆಕ್ಕವಿಟ್ಟವರಾರು ?' ಎಂದು ಈ ಮುಂದಿನಂತೆ ಅಭಿಪ್ರಾಯಪಟ್ಟಿದ್ದಾರೆ.

" ಮನುಷ್ಯನಿಗೆ ಮಾತು ಎಷ್ಟು ಸಲೀಸಾದ ಕೆಲಸವೋ, ಶಿವರಾಮ ಕಾರಂತರಿಗೆ ಬರವಣಿಗೆ ಅಷ್ಟೇ ಸಲೀಸಾದ ಕಾಯಕವಾಗಿತ್ತು. ಆರೇಳು ದಶಕಗಳ ಕಾಲ ಸಾಗಿದ ಅವರ ಲೇಖನ ವ್ಯವಸಾಯ ಪ್ರಜ್ಞಾಹೀನರಾಗುವ ತನಕವೂ ಸಾಗಿದ್ದುದು ಅವರ ಧೈರ್ಯ, ಸ್ಥೈರ್ಯ, ಮನೋಬಲ, ಮನೋಧರ್ಮಗಳ ಗಟ್ಟಿತನಕ್ಕೆ ಸಾಕ್ಷಿ. ತಾವು ಆಡಿದ ಮಾತುಗಳೆಲ್ಲವನ್ನು ಬರೆದಿಟ್ಟವರನ್ನು ಕಾಣಲು ಅಸಾಧ್ಯ. ಕಾರಂತರಿಗೆ ಬರವಣಿಗೆ ಮಾತಿನಂತೆ, ಅವರು ತಮ್ಮ ಜೀವನದುದ್ದಕ್ಕೂ ಬರೆದು ಬರೆದು ಬರಿದಾದದ್ದೇ ಇಲ್ಲ ; ಆಡಿದ ಮಾತು ಮತ್ತು ಬರೆದ ಮಾತುಗಳಲ್ಲಿ ಜೀವಮಾನ ಪರ್ಯಂತ ಶುಚಿ ರುಚಿಗಳನ್ನು ಅವರಂತೆ ಉಳಿಸಿಕೊಂಡ ಸಾಹಿತಿಗಳೂ ಎಲ್ಲೆಲ್ಲೂ ವಿರಳ ; ಎಂದೆಂದಿಗೂ ವಿರಳವೇ. ಅವರಿಗೆ ಬರವಣಿಗೆ ಹೊತ್ತು ಕಳೆಯುವ ಕಾಯಕವಾಗಿರಲಿಲ್ಲ ; ಮನರಂಜನೆಯ ಮಾಧ್ಯಮವೂ ಆಗಿರಲಿಲ್ಲ. ಅದೊಂದು ಗುರಿಸಾಧಿಸುವ ರಚನಾತ್ಮಕ ಕೆಲಸವಾಗಿತ್ತು. ಮನುಕುಲದ ಏಳ್ಗೆಯೇ ಅದರ ಧ್ಯೇಯವಾಗಿತ್ತು. ಕಾರಂತರು ತಮ್ಮ ಮಾತಿಗೆ ತಾವೇ ಮರುಳಾಗಲಿಲ್ಲ. ತಮ್ಮ ಕೃತಿಗಳ ಬಗ್ಗೆ ಮಮಕಾರ ಕಟ್ಟಿಕೊಳ್ಳಲಿಲ್ಲ. 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ' ಎಂಬ ಭಗವದ್ಗೀತೆಯ ತತ್ವಜ್ಞಾನವನ್ನು ಶಿವರಾಮ ಕಾರಂತರಷ್ಟು ಚೆನ್ನಾಗಿ ಬದುಕಿಗೆ ಅಳವಡಿಸಿಕೊಂಡಿರುವ ಸಾಹಿತಿಗಳನ್ನು ಬಿಡಿ, ತತ್ವಜ್ಞಾನಿಗಳನ್ನು ಸಹ ಕಾಣಲು ನಮಗೆ ಕಷ್ಟವಿದೆ. ಬಹುಮುಖ ಪ್ರತಿಭೆಯ ಕಾರಂತರು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಕಾಣಿಕೆ ಅಪಾರ "[೨]

ಸಮಾಜದ ಜೀವಿಯಾದ ಮನುಷ್ಯ ಸಮಾಜದ ಋಣವನ್ನು ತೀರಿಸುವುದು ಒಂದು ಪವಿತ್ರವಾದ ಕಾರ್ಯವೆಂದು ನಂಬಿ ನಡೆದವರು ಕಾರಂತರು. ಸಾಹಿತ್ಯ ನಿರ್ಮಿತಿಯೂ ಅದರ ಸಾಧನಗಳಲ್ಲೊಂದು ಎಂದು ತಿಳಿದಿದ್ದವರು. ತಾವು ಕಂಡುಂಡ ಅನುಭವಗಳನ್ನು ಸಾಹಿತ್ಯದ ಮೂಲಕ ಸಮಾಜಕ್ಕೆ ನೀಡಿ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ವಿಶೇಷವಾದ ಮನ್ನಣೆಯನ್ನು ಪಡೆದುಕೊಂಡರು. ಅವರು ಈ ಸಮಾಜದ ಜೊತೆಗೆ ನಡೆಸಿದ ಸಂಘರ್ಷಾತ್ಮಕವಾದ ನೆಲೆಗಳನ್ನು ಅವರ ಅಪಾರವಾದ ಸಾಹಿತ್ಯದಲ್ಲೂ ಗುರ್ತಿಸಬಹುದಾಗಿದೆ ಎಂಬುದನ್ನು ಶ್ರೀಮತಿ ಮಾಲಿನಿ ಮಲ್ಯರ ಮೇಲಿನ ಮಾತುಗಳು ಸಮರ್ಥಿಸುತ್ತವೆ.

ಇಲ್ಲಿ ಅವರ ಎಲ್ಲಾ ಸಾಹಿತ್ಯವನ್ನು ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸುವ ಬದಲಾಗಿ ಪ್ರಾತಿನಿಧಿಕವಾಗಿ ನನ್ನ ಸಂಪ್ರಬಂಧದ ಉದ್ದೇಶಕ್ಕೆ ಅನುಗುಣವಾಗಿ ಪೂರಕವಾದ ವಿಚಾರಗಳನ್ನು ಚರ್ಚೆ ಮಾಡಿ ಮುಂದುವರೆಯುವ ಪ್ರಯತ್ನವನ್ನು ಮಾಡಿದ್ದೇನೆ.

ರಾಷ್ಟ್ರಭಕ್ತಿಯಿಂದ ಪ್ರೇರಿತರಾದ ಕಾರಂತರು ಉತ್ತರಾದಿ ಶೈಲಿಯಲ್ಲಿ ಹಾಡಲು ಅನುವಾಗುವಂತೆ ರಾಗ -ತಾಳಗಳಿಂದ ಕೂಡಿದ 'ರಾಷ್ಟ್ರಗೀತೆ ಸುಧಾಕರ' ಎಂಬ ಹೆಸರಿನ ೨೨

ಕಿರುಪದ್ಯಗಳ ಸಂಕಲವನ್ನು ೧೯೨೩ ರಲ್ಲಿ ಹೊರತಂದರು. ೧೯೨೧ ರಲ್ಲೆ ಮರಾಠಿಯ ಪ್ರಸಿದ್ಧ ನಾಟಕಕಾರ ರಾಮಗಣೇಶ ಗಡಕರಿಯವರ ಏಕಚ್ ಪ್ಯಾಲಾದ ರೂಪಾಂತರವಾದ 'ನಿರಾಮಹಿಮೆ' ಎಂಬ ನಾಟಕವನ್ನು ಬರೆದುದಾಗಿ ತಿಳಿದು ಬರುತ್ತದೆ. ಇದು ಗ್ರಂಥ ರೂಪದಲ್ಲಿ ಪ್ರಕಟಗೊಂಡಿರದ ಕಾರಣ ಅದು ಮರೆಯಲ್ಲುಳಿಯುವಂತಾಯಿತು. ಅಂತೆಯೇ ವಿದೇಶಿ ಪ್ರವಾಸವೊಂದರ ಸಮಯದಲ್ಲಿ ಮೂಡಿಬಂದ 'ನೀಳ್ಗವನಗಳು' ಎಂಬ ಹೆಸರಿನ ೫೭ ಕವನಗಳ ಒಂದು ಸಂಕಲವನ್ನು ಗಮನಿಸಿದಾಗ ಕಾರಂತರ ತೀಕ್ಷ್ಣ ಪ್ರತಿಕ್ರಿಯೆಗಳ ಹಲವಾರು ಮುಖಗಳನ್ನು ಮತ್ತು ನಿರಾಡಂಬರ ಭಾಷಾ ಶೈಲಿಯನ್ನು ಕಾಣಬಹುದು.

೧೯೨೩ ರಲ್ಲಿ ಪ್ರಾರಂಭಿಸಿದ ಕಾರಂತರ 'ವಸಂತ ' ಎಂಬ ಕನ್ನಡದ ಪತ್ರಿಕೆ ಒಬ್ಬ ಪ್ರತಿಭಾನ್ವಿತ ಲೇಖಕ, ವಿಮರ್ಶಕ, ವಿಚಾರವಾದಿ, ಹೋರಾಟಗಾರ ಸಾಹಿತಿಯನ್ನು ಸೃಷ್ಟಿಸಿತೆಂಬುದಾಗಿ ಹೇಳಬಹುದು. ಇದೇ ಪತ್ರಿಕೆಯಲ್ಲಿ ಮೊದಲ ಎರಡು ವರ್ಷಗಳಲ್ಲಿ 'ವಿಚಿತ್ರಕೂಟ', 'ಭೂತ' ಎಂಬ ಎರಡು ಪತ್ತೆದಾರಿ ಕಥೆಗಳನ್ನು ಪ್ರಕಟಿಸಿದರು. ಅಂದಿನ ಸಾಂಸ್ಕೃತಿಕತೆಗೆ ಮುಖಾಮುಖಿಯಾದಂತಹ ವಿಚಾರಗಳನ್ನು ಈ ಪತ್ರಿಕೆಯಲ್ಲಿ ಸಾಹಿತ್ಯದ ಮುಖಾಂತರ ಜನರಿಗೆ ತಲುಪಿಸುವ ಪ್ರಯತ್ನವನ್ನು ಮಾಡಿದರು.

**ಕಾದಂಬರಿ ಪ್ರಪಂಚ :**

ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲಿ ಕನ್ನಡ ಸಾಹಿತ್ಯದ ಮೇಲೆ ಬಂಗಾಳಿ, ಮರಾಠಿ, ತಮಿಳು ಮುಂತಾದ ಅನೇಕ ಭಾಷೆಗಳು ಪ್ರಭಾವವನ್ನು ಬೀರತೊಡಗಿದವು. ಮುಖ್ಯವಾಗಿ ರವೀಂದ್ರನಾಥ ಠಾಗೂರ್, ಹರಿನಾರಾಯಣ ಆಪ್ಟೆ, ಬಂಕಿಮಚಂದ್ರ, ಪ್ರೇಮ್‌ಚಂದ್, ಸುಬ್ರಮಣ್ಯ ಭಾರತಿ, ವಿಶ್ವನಾಥ ಸತ್ಯನಾರಾಯಣ, ತಕಳಿ ಶಿವಶಂಕರ ಪಿಳ್ಳೆ ಮುಂತಾದವರ ಪ್ರಭಾವಿತರಾಗಿ ಗುಲ್ವಾಡಿ ವೆಂಕಟರಾಯರು, ಎಂ.ಎಸ್.ಪುಟ್ಟಣ್ಣ , ಗಳಗನಾಥರು, ಅಣ್ಣಾಜಿ ರಾಯರು, ಬೋಳಾರ ಬಾಬುರಾಯರು ಅನೇಕ ಸಾಮಾಜಿಕ ಕಳಕಳಿಯ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರಲ್ಲದೆ ಸ್ವತಃ ರಚನೆಯಲ್ಲಿ ತೊಡಗಿದವರು. ಪ್ರಾರಂಭದಿಂದಲೂ ಸಹ ಸಾಮಾಜಿಕವಾದ ಕಳಕಳಿಯನ್ನು ಹೊಂದಿದ್ದಂತಹ ಕಾರಂತರು ಇವರೆಲ್ಲರ ಪ್ರಭಾವದಿಂದಾಗಿ ಅನೇಕ ಸಾಮಾಜಿಕ ಕಾದಂಬರಿಗಳನ್ನು 'ವಸಂತ ' ಪತ್ರಿಕೆಯಲ್ಲಿ ಪ್ರಕಟಿಸಿದರು.

ಮೂಢನಂಬಿಕೆಗಳನ್ನು ಹೊಂದಿದ್ದು ಭೂತ ಪ್ರೇತಗಳು ನಿಜವೆಂದು ನಂಬಿ ಭಯಬೀತರಾದ ಜನರಿಗೆ ವೈಚಾರಿಕವಾದ, ವೈಜ್ಞಾನಿಕವಾದ ಪ್ರಯೋಗಗಳಿಂದ ವಿಶೇಷವಾದ ಪ್ರಜ್ಞೆಯನ್ನು ಜಾಗೃತಗೊಳಿಸಿ ಭಯ ನಿವಾರಣೆ ಸಾಧ್ಯ ಎಂಬುದನ್ನು 'ಭೂತ ' ಎಂಬ ಕಾದಂಬರಿಯ ಮೂಲಕ

ಜಾಗೃತಿ ಮೂಡಿಸಿದರು. ಇಂದಿಗೂ ಆಧುನಿಕ ನಗರಗಳೂ ಸೇರಿದಂತೆ ವಿಲಕ್ಷಣವಾಗಿ ಕಂಡುಬರುವ ವೇಶ್ಯೆಯ ಬದುಕು, ಅವಳ ಮಾನಸಿಕವಾದ ತಳಮಳ, ವೇಶ್ಯಾವೃತ್ತಿಯಿಂದಾಗುವ ಸಾಮಾಜಿಕ ಹಾನಿಯನ್ನು ತಿಳಿಸುವ 'ನಿರ್ಭಾಗ್ಯ ಜನ್ಮ ' ಮತ್ತು 'ಕನ್ಯಾಬಲಿ ' ಅಥವಾ 'ಸೂಳೆಯ ಸಂಸಾರ' ಎಂಬ ಸಾಮಾಜಿಕ ಕಾದಂಬರಿಗಳನ್ನು ಬರೆಯುವುದರ ಮೂಲಕ ಸಾಮಾಜಕ ಸುಧಾರಣೆಯ ಧ್ಯೇಯೋದ್ದೇಶಗಳನ್ನು ವ್ಯಕ್ತಪಡಿಸಿದರು. ಕಟುವಾದ ವಿಡಂಬನೆ, ಹಾಸ್ಯದ ಲೇಪನದಿಂದ ಕೂಡಿರುವ ನಮ್ಮ ಸಾಮಾಜಿಕ ಲೋಪದೋಷಗಳ ಕುರಿತ ವ್ಯಂಗ್ಯ ಚಿತ್ರಣವನ್ನು ಒಳಗೊಂಡಿರುವ ಈ ಸೂಳೆಯ ಸಂಸಾರ ಅಥವಾ ಕನ್ಯಾಬಲಿ ಎಂಬ ಕಾದಂಬರಿಯಲ್ಲಿ ಸಮಾಜದ ಕೆಲವು ಅಮಾನವೀಯ ಸಂಪ್ರದಾಯಗಳಲ್ಲೊಂದಾದ ಒಬ್ಬ ವಿಧವೆಯ ಬದುಕನ್ನು ಚಿತ್ರಿಸಿದ್ದಾರೆ. ಸಮಾಜ ಆ ವಿಧವೆಯನ್ನು ನಡೆಸಿಕೊಳ್ಳುವ ಪರಿ, ನೋಡುವ ದೃಷ್ಟಿ ಇವೆಲ್ಲವನ್ನೂ ಸೂಕ್ಷ್ಮವಾಗಿ ಗುರ್ತಿಸುವ ಅಂತಹ ಒಂದು ವ್ಯವಸ್ಥೆಗೆ ಎದುರಾಗುವ ಪರಿಯನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಗ್ರಾಮ ಜೀವನದ ಸುತ್ತಾಟದಲ್ಲಿ ಪಡೆದ ಅನುಭವ, ಅವರು ಕಂಡ ಹೊಲೆಯರ ಮನೆಗಳು, ಅವರ ಜೀವನದ ರೀತಿಗಳನ್ನು ಸಾಕಷ್ಟು ಕಂಡು ಅವುಗಳಿಗೆ ಒಂದು ರೂಪ ಕೊಟ್ಟು ೧೯೩೩ ರಲ್ಲಿ 'ಚೋಮನ ದುಡಿ ' ಕಾದಂಬರಿಯನ್ನು ಬರೆದರು. ಅಸ್ಪೃಶ್ಯರಾದ ಹೊಲೆಯರ ತಂಡದಲ್ಲಿ ಬರುವ ಮೇರ, ಬೈರ, ಅಜಲ, ಮಾರಿ - ಎಂಬ ಬೇರೆ ಬೇರೆ ನಾಲ್ಕಾರು ಉಪ ಜಾತಿಗಳಲ್ಲಿ ಮೇರರು ಸಾಗುವಳಿಯನ್ನು ಮಾಡಿಕೊಂಡಿರಲು ಸಾಧ್ಯವಿದೆ. ಆದರೆ ತೀರ ಕೆಳಗಿನವರೆಂದು ಎಣಿಸಲ್ಪಡುವ ಮಾರಿ ಹೊಲೆಯರಿಗೆ ಅಷ್ಟು ಅವಕಾಶವನ್ನು ಸಮಾಜ ಕೊಟ್ಟಿರಲಿಲ್ಲ. ಅವರ ನೆರಳಿನ ಸ್ಪರ್ಶವೂ ಕೂಡದೆನ್ನುವವರೂ ಇದ್ದಾರೆ. ಇದ್ದುದನ್ನೇ ತಿಂದೋ, ಸತ್ತ ಜಾನುವಾರುಗಳನ್ನು ತಿಂದೋ ಇಲ್ಲವೆ ನಿಂದನಿಯವಾದ ಇನ್ನಾವುದೋ ವೃತ್ತಿಯಿಂದ ಅವರ ಜೀವನ ಸಾಗಬೇಕು. ಇಂಥ ಬಳಗದ ಜೀವಿಯಾದ ಚೋಮನ ಮುಖಾಂತರ ಅಂದಿನ ಸಮಾಜದ ಸಾಂಸ್ಕೃತಿಕತೆಯನ್ನು ಕಾರಂತರು ಕಟ್ಟಿಕೊಡುತ್ತಾರೆ. ಬಂಡವಾಳಶಾಹಿಗಳ ಧೋರಣೆಗಳನ್ನು ಮಾರ್ಮಿಕವಾಗಿ ಅಭಿವ್ಯಕ್ತಿಸುತ್ತಾರೆ.

ಸಾಮಾಜಿಕ ಅನ್ಯಾಯದ 'ಸತೀ ಪದ್ಧತಿ' ಅಥವಾ 'ಸತಿಸಹಗಮನ ' ಪದ್ಧತಿಯ ಕರಾಳ ಮುಖವನ್ನು , ನಮ್ಮ ಜನರ ಧಾರ್ಮಿಕವಾದ ಮೂಢನಂಬಿಕೆಗಳನ್ನು ಅನಾವರಣಗೊಳಿಸುವಂತಹ ಕಾದಂಬರಿ - 'ಸರಸಮ್ಮನ ಸಮಾಧಿ' ಗಂಡ ಸತ್ತಾಗ ಸತಿಯನ್ನು ಚಿತೆಗೆ ಬಲವಂತದಿಂದ ನೂಕಲ್ಪಟ್ಟು ಗುಡಿ ಕಟ್ಟಿಸಿಕೊಂಡು ಜನರಿಂದ 'ಮಹಾಸತಿ ' ಎಂದು ಅನಿಸಿಕೊಂಡರೂ ದೇಹದ ಬಯಕೆಯಿಂದ ಅತೃಪ್ತಿಗೊಂಡು ಪ್ರೇತ ಸ್ವರೂಪಿಯಾಗಿ ಅಲೆಯುತ್ತಿರುತ್ತಾಳೆ. ಆದರೆ ಅತೃಪ್ತ ಮತ್ತು ಅಸಮ ದಾಂಪತ್ಯ ಜೀವನದಿಂದ ನೊಂದವರೆಲ್ಲಾ ಈ ಮಹಾಸತಿಯ ಗುಡಿಗೆ ಸುತ್ತು ಬಂದು ತಮ್ಮ ದಾಂಪತ್ಯ ಜೀವನ ಸುಗಮವಾಗಲೆಂದು ಹರಕೆ ಹೇಳಿಕೊಳ್ಳುತ್ತಿದ್ದ ವಿಪರ್ಯಾಸವನ್ನು ಈ ಕಥೆ

ಹೊಂದಿದೆ. ಇದು ಈ ಕಥೆಯ ವಿಡಂಬನೆಯೂ ಹೌದು. ಸಾಂಗಿಕ ಜೀವನದ ಪ್ರಶ್ನೆಗಳನ್ನು ಇಲ್ಲಿ ತರುತ್ತಾರೆ. ಅಂದಿನ ಮೂಢನಂಬಿಕೆಗಳ ವಿರುದ್ಧ ನಡೆಸಿದ ಸಂಘರ್ಷವೇ ಇದು.

'ಜಗತ್ತು ಮುಂದುವರಿಯುತ್ತಿರುವ ಇಂದಿನ ದಿನಗಳಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಅಗತ್ಯ. ನಾನು ಇಷ್ಟೆಲ್ಲಾ ಜ್ಞಾನ ಸಂಪಾದನೆ ಮಾಡಿದ್ದು ಕೂಡ ಇಂಗ್ಲಿಷ್ ಭಾಷೆಯ ಸಂಪರ್ಕದಿಂದಲೇ ' ಎಂಬುದು ಕಾರಂತರ ನಿಲುವಾಗಿತ್ತು. ಇಂಗ್ಲಿಷ್ ಬಗೆಗೆ ಕುವೆಂಪು ಅವರ ನಿಲುವೂ ಸಹಾ ಇದೇ ಆಗಿತ್ತು. ಇಂಗ್ಲಿಷ್‌ನ ಮೂಲಕ ಬಂದ ನವನಾಗರೀಕ ಜಗತ್ತಿನ ಸಂಸ್ಕೃತಿ ಸಹಜವಾಗಿಯೇ ಕಾರಂತರನ್ನೂ, ಕುವೆಂಪು ಅವರನ್ನೂ ಪರೀಕ್ಷೆಗೆ ಒಳಗಾಗುತ್ತಾ ಬಂದಿರುವುದನ್ನು ಕಾಣಬಹುದು. ಕಾರಂತರ ಕಾದಂಬರಿಗಳಲ್ಲಿ ಬರುವ ಆಧುನಿಕ ಪಾತ್ರಗಳಾದ ಲಚ್ಚ , ಶಂಭು ಇವರನ್ನು ಪರಕೀಯರನ್ನಾಗಿ ಮಾಡುವುದು ಹೊಸ ವಿದ್ಯಾಭ್ಯಾಸ ಎಂಬುದನ್ನು ಗುರುತಿಸಬಹುದಾಗಿದೆ.

ರಾಷ್ಟ್ರೀಯ ಚಳುವಳಿಯಲ್ಲಿ ಪಾಲುಗೊಂಡಿದ್ದ ಕಾರಂತರೆ ಒಂದು ಪಾತ್ರವಾಗಿ ಕಾಣಿಸಿಕೊಂಡು, ಆಧುನಿಕರಣ ಆಕರ್ಷಣೆಗೆ ಒಳಗಾಗಿ, ರಾಷ್ಟ್ರೀಯ ಚಳುವಳಿಯ ಅಲೆಯಲ್ಲಿ ಕೊಚ್ಚಿ ಹೋಗಿ ಗುರಿ ಸಾಧಿಸಲು ವಿಫಲವಾಗಿ ಜೀವನದ ನಿಜವಾದ ಮೌಲ್ಯಗಳು ಯಾವುವು? ಎಂದು ತಿಳಿದು ಕೊನೆಗೂ ಹುಟ್ಟಿದ ನೆಲಕ್ಕೆ ಮರಳಿ ಬಂದು ಕಾಯಕ ಜೀವಿಯಾಗಿ ಜೀವಿಸಲು ನಿರ್ಧರಿಸಿದ ಕಥೆಯನ್ನು ಹೊಂದಿರುವ ಕಾದಂಬರಿ - 'ಮರಳಿ ಮಣ್ಣಿಗೆ ' ಆಂಗ್ಲ ಕಾದಂಬರಿಕಾರ್ತಿ ಪರ್ಲ್ ಬಕ್ ಎಂಬಾಕೆಯ 'ಗುಡ್ ಅರ್ಥ್' ಕಾದಂಬರಿಯನ್ನೋದಿ, ಸ್ಫೂರ್ತಿಗೊಂಡು ಬರೆದಿರುವಂತಹುದು. ದಕ್ಷಿಣ ಕನ್ನಡ ಜಿಲ್ಲೆಯ ಬಡ ಬ್ರಾಹ್ಮಣ ಮನೆತನದ ಮೂರು ತಲೆಮಾರುಗಳಲ್ಲಿ ಕಂಡ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳೇ ಕಥೆಯ ಮುಖ್ಯ ವಸ್ತು. ಇಲ್ಲಿಯೂ ಒಂದು ಸಂಸ್ಕೃತಿಗೆ ಮುಖಾಮುಖಿಯಾಗುವ ಮೂರು ತಲೆಮಾರುಗಳನ್ನು ಗುರ್ತಿಸಬಹುದಾಗಿದೆ. 'ಮರಳಿ ಮಣ್ಣಿಗೆ , ಬೆಟ್ಟದ ಜೀವ, ಅಳಿದ ಮೇಲೆ, ಮೈಮನಗಳ ಸುಳಿಯಲ್ಲಿ ಕೃತಿಗಳನ್ನು ನೀಡಿದ ಲೇಖಕ ನಿಸ್ಸಂದೇಹವಾಗಿ ಕನ್ನಡ ಕಾದಂಬರಿ ಪರಂಪರೆಯಲ್ಲಿ ಅತ್ಯಂತ ದೊಡ್ಡ ಲೇಖಕ ' ಎಂಬ ಡಿ.ಆರ್.ನಾಗರಾಜ ಅವರ ಮಾತುಗಳು ಕಾರಂತರ ಬರವಣಿಗೆಯ ಶ್ರೇಷ್ಠತೆಯನ್ನು ತಿಳಿಸುತ್ತವೆ.

ಮನುಷ್ಯ ತನ್ನ ಅಸ್ತಿತ್ವಕ್ಕಾಗಿ ನಿಸರ್ಗದೊಂದಿಗೆ ನಡೆಸುವ ಹೋರಾಟ, ಅದರ ಜೊತೆಗಿನ ಅನುಸಂಧಾನವನ್ನು ಹೊಂದಿದ ಕಾದಂಬರಿ 'ಬೆಟ್ಟದ ಜೀವ'. ಈ ಕಾದಂಬರಿಯಲ್ಲಿ ಬರುವ ಶಿವರಾಮಯ್ಯ ನಗರೀಕರಣಕ್ಕೆ ಒಳಪಟ್ಟವನು. ಗೋಪಾಲಯ್ಯನ ಮಗ ಶಂಭು ನಗರದಲ್ಲಿ ಓದಿ ಅಲ್ಲಿಯ ಆಕರ್ಷಣೆಗೆ ಒಳಗಾದವನು. ತನ್ನ ತಂದೆ ವಾಸ ಮಾಡುತ್ತಿದ್ದ ಪರಿಸರದಲ್ಲೇ ತನ್ನ ಜೀವನ

ರೂಪಿಸಿಕೊಳ್ಳಲು ಸಾಧ್ಯವಿಲ್ಲ ಎಂದು ತಿಳಿದವನು. ಈ ರೀತಿಯ ವೈರುದ್ಧಯವಾದ ನಿಲುವುಗಳಿಂದ, ವಿಶಿಷ್ಟ ನಿರೂಪಣಾ ಶೈಲಿಯ ಮೂಲಕ ಜನಪ್ರಿಯವಾದ ಈ ಕಾದಂಬರಿಯಲ್ಲೂ ನನ್ನ ಈ ಅಧ್ಯಯನಕ್ಕೆ ಒಳಪಡುವ ಕಾರಂತರ ಧೋರಣೆಗಳನ್ನು ಗುರ್ತಿಸಬಹುದಾಗಿದೆ.

ಅಧ್ಯಾಪಕನೊಬ್ಬನ ಬಡತನದ ಬದುಕನ್ನು ಕೇಂದ್ರವಾಗಿಸಿಕೊಂಡು ಕೊನೆಗೊಂದು ದಿನ ಎಲ್ಲವೂ ಸಾವಿನೊಂದಿಗೆ ಪರ್ಯಾವಸಾನವಾಗುವುದನ್ನು ಚಿತ್ರಿಸಿರುವ 'ಮುಗಿದ ಯುದ್ಧ', ದಾಂಪತ್ಯ ವಿರಸದ ಮತ್ತೊಂದು ಮುಖವನ್ನು ಚಿತ್ರಿಸುವಂತಹ 'ಹೆತ್ತಳಾ ತಾಯಿ ', ಭಾರತ ದೇಶದ ಸ್ವಾತಂತ್ರ್ಯ ಚಳುವಳಿ, ಅದರ ನೇತಾರರನೇಕರ ದ್ವಂದ್ವ ನೀತಿಗಳನ್ನು ಪರಿಣಾಮಕಾರಿಯಾಗಿ ಬಿತ್ತರಿಸಿರುವ ರಾಜಕೀಯ ಕಾದಂಬರಿ 'ಔದಾರ್ಯದ ಉರುಳಲ್ಲಿ ' ಎಂಬುದಾಗಿದೆ.

ಡಾಂಬಿಕ ಸನ್ಯಾಸತ್ವಕ್ಕಿಂತ ಮಾನವೀಯ ಅಂತಃಕರಣದ ಸಾಂಸಾರಿಕವಾದ ಬದುಕೇ ಸಾರ್ಥಕ ಮತ್ತು ಸುಂದರ ಎಂಬ ಸಂದೇಶದ ವಿಚಾರಗಳು (ಸನ್ಯಾಸಿಯ ಬದುಕು) ಕಲಾಜೀವನ ಮತ್ತು ಅವಜೀವನದ ಪರಿಚಯ ಮಾಡುವ ವಿಷಯ, (ಮೊಗ ಪಡೆದ ಮನ) ಬುಡಕಟ್ಟು ಜನಾಂಗ, ಅವರ ದೇವರು, ಭೂತ, ನಂಬಿಕೆ, ಸಂಪ್ರದಾಯಗಳ ಹಿನ್ನೆಲೆಯಲ್ಲಿ ಮೂಡಿಬಂದಿರುವ ಕಥಾ ವಸ್ತು (ಕುಡಿಯರ ಕೂಸು) ಹೀಗೆ ಕಾದಂಬರಿಗಳಿಗೆ ಆಯುದ್ದುಕೊಂಡ ವಸ್ತುಗಳಲ್ಲಿ ಕಾರಂತರು ತಮ್ಮ ಜೀವನಾನುಭವದ ವಿಚಾರಗಳು ಮಂಡಿತವಾಗಿವೆ.

ವೈಚಾರಿಕತೆ ಮತ್ತು ಮಾನವೀಯತೆಯ ಸಮನ್ವಯತೆಯನ್ನು ತನ್ನ ಅತೀಂದ್ರಿಯ ಜ್ಞಾನದ ಮೂಲಕ ಸಾಧಿಸುವ 'ಮೂಕಜ್ಜಿಯ ಕನಸುಗಳು' ಒಂದು ವಿಶಿಷ್ಟವಾದ ಸಾಮಾಜಿಕ ಕಾದಂಬರಿ. ಧರ್ಮ, ಮತ, ಪಂಥ, ಸಂಪ್ರದಾಯಗಳು ಪ್ರಾಚೀನ ಕಾಲದ ಋಷಿಗಳ ಅಂತರ್‌ದೃಷ್ಟಿ ಇವೆಲ್ಲವನ್ನು ಮೂಕಜ್ಜಿಯ ಮೂಲಕ ಕಾರಂತರು ತಮ್ಮ ಗ್ರಹಿಕೆಯನ್ನು ಅಭಿವ್ಯಕ್ತಿಸಿದ್ದಾರೆ - 'ನನ್ನ ಲೆಕ್ಕಾಚಾರ ಇದು - ಹುಟ್ಟಿದ್ದೇವೆ ; ನಾವು ಬದುಕಿದ್ದೇವೆ. ಯಾಕೆ ಅಂತ ನಮಗೆ ಗೊತ್ತಿಲ್ಲ. ಇರುವಷ್ಟು ದಿವಸ ನಮಗೂ ಹಿತವಾಗಿ, ನಾಲ್ಕು ಜನರಿಗೂ ಹಿತವಾಗುವ ಹಾಗೆ ಬಾಳುವುದಪ್ಪ , ಜನರಿಗೆ ಅಂದರೆ, ಬರೀ ಮನುಷ್ಯರಿಗಷ್ಟೇ ಅಲ್ಲ ಆಚೀಚಿನ ಎಲ್ಲಾ ಜೀವಿಗಳಿಗೂ ಹಿತವಾಗುವ ಹಾಗೆ ಇರಬೇಕು. ಹಾಗೆ ಇರುವುದು ಕಷ್ಟವಾಗಬಹುದು. ನೂರಾರು ಜನರಿಗೆ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವುದೇ ದೊಡ್ಡ ಕೆಲಸವಾಗುತ್ತದೆ. ಅಂಥದರಲ್ಲಿ ಹೊರಗಿನವರ ಹಿತವ ಮಾತೇನು ಬಂತು ? ಆಗ ಇಷ್ಟನ್ನಾದರೂ ಮಾಡಬಹುದು. ಇನ್ನೊಬ್ಬರಿಗೆ ಅನ್ಯಾಯವಾಗದ ರೀತಿಯಲ್ಲಿ ಬದುಕುವುದು. ಪರರಿಗೆ ಸುಖ ಕೊಡಲು ಬಾರದೆ ಹೋದರೆ, ದುಃಖ ಕೊಡದೆ ಇರುವುದಪ್ಪ ' ಎನ್ನುವ ವಿಶಾಲ ಮನೋಭಾವದ ತತ್ವವನ್ನು ಮೂಕಜ್ಜಿಯು ಪ್ರತಿಪಾದಿಸುತ್ತಾಳೆ. ಮನುಷ್ಯ ಅಳಿದ

ಮೇಲೆ ಉಳಿಯುವುದೇನು ಮುಂತಾದ ಜೀವನ ಮೌಲ್ಯಗಳನ್ನಾಧರಿಸಿದ - 'ಅಳಿದ ಮೇಲೆ', ಆದರ್ಶವನ್ನು ಬಿಡದೆ, ಅದನ್ನು ತೋರಿಸಿಕೊಳ್ಳದೆ ಕೊನೆಯತನಕವೂ ಆದರ್ಶಮಯವಾಗಿ ಬದುಕಿದ ಶಿವಪ್ಪನೆಂಬ ಕಥಾನಾಯಕನ ಸುತ್ತ ಹೆಣೆದಿರುವ 'ಜಾರುವ ದಾರಿಯಲ್ಲಿ ' - ಹೀಗೆ ಕಾರಂತರ ಹೆಚ್ಚಿನ ಕಾದಂಬರಿಗಳಲ್ಲಿ ನನ್ನ ಅಧ್ಯಯನದ ವಿಷಯಕ್ಕೆ ಪೂರಕವಾದ ಸಾಂಸ್ಕೃತಿಕ ಸಂಘರ್ಷಗಳನ್ನು ಗುರುತಿಸಿಕೊಳ್ಳಬಹುದಾಗಿದೆ.

'' ಪರಂಪರಾಗತ ಸಾಮಾಜಿಕ ವ್ಯವಸ್ಥೆಯೊಂದು ಆಧುನಿಕ ಮೌಲ್ಯಗಳಿಗೆ ಮುಖಾಮುಖಿಯಾದಾಗ ಪಲ್ಲಟಗೊಳ್ಳುವ ಕ್ರಿಯೆ ಶಿವರಾಮ ಕಾರಂತರ ಕಾದಂಬರಿಗಳಲ್ಲಿನ ಒಂದು ಮುಖ್ಯ ವಸ್ತು. ವಾಸ್ತವತಾವಾದಿ ಪರಂಪರೆಯೊಂದು ನಿಧಾನವಾಗಿ ಕಣ್ದೆರೆಯುತ್ತಿದ್ದ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕಾರಂತರು ತಮ್ಮ ಕಾದಂಬರಿಗಳನ್ನು ಬರೆಯಲಾರಂಭಿಸಿದರು. ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆ ಕಾರಂತರ ಕಾದಂಬರಿಗಳಲ್ಲಿ ಕಂಡುಬರುವ ಭೌಗೋಲಿಕ ಪರಿಸರ. ಆದರೆ ಕಾರಂತರು ಎಂಥ ಪ್ರತಿಭಾಶಾಲಿ ಲೇಖಕರೆಂದರೆ ಅವರ 'ಪ್ರಾದೇಶಿಕ ' ಕಾದಂಬರಿಗಳು ಅಖಿಲ ಕರ್ನಾಟಕ, ಅಖಿಲ ಭಾರತ, ಅಷ್ಟೇಕೆ ಒಟ್ಟು ತೃತೀಯ ಜಗತ್ತಿನ ಸಾಮಾಜಿಕ ಸ್ಥಿತ್ಯಂತರಗಳ ಕೆಲವು ಮೂಲ ಮಾದರಿಗಳನ್ನು ಸೂಕ್ಷ್ಮವಾಗಿ ಹೊಳೆಯಿಸುತ್ತವೆ. ಕಾರಂತರ ಅಷ್ಟೊಂದು ಸಫಲವಲ್ಲದ ಕಾದಂಬರಿಗಳಲ್ಲಿ ಈ ಪ್ರಕ್ರಿಯೆ ಹೇಳಿಕೆ, ಭಾಷಣ, ವ್ಯಾಖ್ಯಾನಗಳಲ್ಲಿ ದಾಖಲಾಗಿದ್ದರೆ ಅವರ ಅತ್ಯುತ್ತಮ ಕಾದಂಬರಿಗಳಲ್ಲಿ ಒಂದು ಸಂಕೀರ್ಣ ಅನುಭವವಾಗಿ ಮೂಡಿ ಬರುತ್ತದೆ. ಕೆಲವು ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆಯೇ ಪ್ರಧಾನ ವಸ್ತುವಾಗಿದೆ. ಇನ್ನು ಕೆಲವು ಕಾದಂಬರಿಗಳಲ್ಲಿ ಅವುಗಳ ಮುಖ್ಯ ವಸ್ತು ಏನೇ ಇರಲಿ. ಗಂಡ -ಹೆಣ್ಣಿನ ಸಂಬಂಧ ಇರಬಹುದು, ಮನುಷ್ಯನ ಸ್ವಭಾವದ ವಿಶ್ಲೇಷಣೆ ಇರಬಹುದು, ಜೀವನದ ಅರ್ಥದ ಶೋಧನೆ ಇರಬಹುದು - ಆಧುನೀಕರಣದ ಪ್ರಕ್ರಿಯೆ ಒಂದು ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ. ಆದ್ದರಿಂದಲೇ ಕಾರಂತರ ಮನೋವೈಜ್ಞಾನಿಕ ಇಲ್ಲವೇ ತಾತ್ವಿಕ ತುಡಿತಗಳು ಕೇವಲ ದೇಶಾವರಿ ಎನ್ನಿಸುವುದಿಲ್ಲ, ಒಂದು ನಿರ್ದಿಷ್ಟ ಕಾಲ, ದೇಶದ ಆವರಣದಲ್ಲಿ ಅವು ನಿಜವಾಗುತ್ತವೆ ಅಧಿಕೃತವಾಗುತ್ತವೆ ''[೩]

ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆಗಳು ಪರಂಪರಾಗತ ಸಾಮಾಜಿಕ ವ್ಯವಸ್ಥೆಗೆ ಮುಖಾಮುಖಿಯಾದಾಗ ನಡೆಯುವ ಸಾಂಸ್ಕೃತಿಕವಾದ ಸಂಘರ್ಷವನ್ನು ವಿಮರ್ಶಕರಾದ ಟಿ.ಪಿ.ಅಶೋಕರವರ ಮಾತುಗಳು ಸಮರ್ಥಿಸುತ್ತವೆ.

ಸಣ್ಣ ಕಥೆಗಳು :

ಸಮಾಜ ಸುಧಾರಣೆಯ ಧ್ಯೇಯಗಳನ್ನು ಮೈಗೂಡಿಸಿಕೊಂಡಿದ್ದ ಕಾರಂತರು ಸಾಮಾಜಿಕ ಅನಿಷ್ಟ ಪದ್ಧತಿಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತ ಅವುಗಳಿಂದಾಗುವ ಹಾನಿಗಳ ಕುರಿತು ಸಮಾಜಕ್ಕೆ ಎಚ್ಚರಿಕೆ ನೀಡುವ ಸಲುವಾಗಿ ಬರವಣಿಗೆಯ ಕಾಯಕದಲ್ಲಿ ಸಣ್ಣ ಕಥೆಗಳ ಮಾಧ್ಯಮವನ್ನು ಬಳಸಿಕೊಂಡಿದ್ದನ್ನು ವಿಶೇಷವಾಗಿ ಗುರ್ತಿಸಬಹುದು. ಕಾರಂತರ ಅಂದಿನ ಮನೋಧರ್ಮ ಮತ್ತು ಅಂದಿನ ಸಂಘರ್ಷಾತ್ಮಕವಾದ ಸಾಂಸ್ಕೃತಿಕ ಸನ್ನಿವೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಮರ್ಶಿಸಿದಾಗ ಈ ಕಥೆಗಳು ಐತಿಹಾಸಿಕ ಮಹತ್ವವನ್ನು ಪಡೆದುಕೊಳ್ಳುತ್ತವೆ. ಏಕೆಂದರೆ ಕಾರಂತರು ತಮ್ಮ ಆದರ್ಶಗಳಿಗೆ ರೂಪುಕೊಡಲು ಬರವಣಿಗೆಯನ್ನು ಉಪಯೋಗಿಸಿಕೊಂಡಿದ್ದರೂ ತಮ್ಮ ಅನುಭವ ಜನ್ಯ ವಸ್ತುಗಳನ್ನು ಅವರು ಸುತ್ತಲಿನ ಸಮಾಜದಿಂದ ಎತ್ತಿಕೊಳ್ಳುತ್ತಿದ್ದರಿಂದ ಅವರ ಸಣ್ಣ ಕಥೆಗಳಲ್ಲೂ ಕೃತಕ ಮತ್ತು ಕಾಲ್ಪನಿಕ ಸನ್ನಿವೇಶಗಳು ತೀರ ಕಡಿಮೆ.

ಬಡತನ, ಹಸಿವು ಮನುಷ್ಯರನ್ನು ಎಂಥೆಂಥ ಪರಿಸ್ಥಿತಿಗೆ ತಳ್ಳುತ್ತದೆ ಎಂಬುದನ್ನು ವಿವಿಧ ಪಾತ್ರಗಳು ವಿವಿಧ ದೃಷ್ಟಾಂತಗಳಿಂದ ಉದಾಹರಿಸುವ ಕಥೆಗಳನ್ನೊಳಗೊಂಡ ನೈಜ್ಯ ಜೀವನಾನುಭವಗಳ ಪ್ರೇರಣೆಯಿಂದ ಹೊರಬಂದ ಕಾರಂತರ ಮೊದಲ ಕಥಾ ಸಂಕಲನ 'ಹಸಿವು' ಎಂಬುದರಲ್ಲಿ ಕಾಣಬಹುದು. ತಾರುಣ್ಯದ ಹೊಸ್ತಿಲಲ್ಲಿರುವ ಎಳೆಯರಲ್ಲಿ ಕಂಡು ಬರುವ ಕಾಯುವ ಪ್ರವೃತ್ತಿ ಮತ್ತು ಚೇಷ್ಟೆಗಳನ್ನು 'ಹಾವು ' ಎಂಬ ಸಂಕೇತದಿಂದ ಕರೆದು ಅದೇ ಹೆಸರಿನ ಕಥಾ ಸಂಕಲವನ್ನು ಹೊರತಂದರು. ಹೀಗೆ ಅವರ ಸಣ್ಣ ಕಥೆಗಳಲ್ಲಿ ಗಮನಿಸಬಹುದಾಗಿದೆ.

ಕಾರಂತರು ಜೀವನದುದ್ದಕ್ಕೂ ಪಡೆದುಕೊಂಡಿದ್ದ ವಿಶಾಲವಾದಂತಹ ಅನುಭವಗಳಿಗೆ ಮತ್ತು ವಿಶೇಷವಾದ ಜ್ಞಾನಕ್ಕೆ ಅವರ ಪ್ರವಾಸಗಳ ಹವ್ಯಾಸವು ವಿಶೇಷವಾಗಿ ನೆರವಾಗಿದೆ ಅವರ -ಅಬೂವಿನಿಂದ ಬರಾಮುಕ್ಕೆ, ಅಪೂರ್ವ ಪಶ್ಚಿಮ, ಪಾತಾಳಕ್ಕೆ ಪಯಣ, ಪೂರ್ವದಿಂದ-ಅತ್ಯಪೂರ್ವಕ್ಕೆ , ಅರಸಿಕರಲ್ಲ , ಯಕ್ಷರಂಗಕ್ಕಾಗಿ ಪ್ರವಾಸ ಎಂಬ ಪ್ರವಾಸ ಕಥನಗಳಲ್ಲೂ ಸಹ ಕಾರಂತರು ನಮ್ಮ ದೇಶದ ಸಾಂಸ್ಕೃತಿಕತೆಯ ಜೊತೆಗೆ ಬೇರೆ ಬೇರೆ ದೇಶಗಳ ಸಂಸ್ಕೃತಿ, ಕಲೆ, ಸಾಹಿತ್ಯ, ವಿಜ್ಞಾನ ಇತ್ಯಾದಿಗಳ ವಿಚಾರಗಳನ್ನು ತಿಳಿಸುವಲ್ಲಿಯೂ ಸಂಘರ್ಷಾತ್ಮಕವಾದ ಧ್ವನಿಗಳನ್ನು ಗುರುತಿಸಬಹುದಾಗಿದೆ. ಕಾರಂತರ ಬರಹಗಳ ಕಥಾವಸ್ತುಗಳನ್ನು ವಿವರಿಸುತ್ತ ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ.ತಾಳ್ತಜೆ ವಸಂತಕುಮಾರ್‌ರವರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ -

" ಕಾರಂತರು, ಅನ್ಯಾನ್ಯ ಶಿಸ್ತುಗಳಲ್ಲಿ ತಮಗಿರುವ ಪ್ರವೇಶ, ಪರಿಣತಿ, ಪ್ರೌಢಿಮೆಗಳನ್ನು ತಮ್ಮ ಕಾದಂಬರಿಗಳಲ್ಲೂ ಪ್ರದರ್ಶಿಸುತ್ತಾರೆ. ಪ್ರಾಣಿಗಳ ಜೀವನ ಕ್ರಮಗಳು, ವೈವಿಧ್ಯಗಳು, ಚಿತ್ರ -ಶಿಲ್ಪದಂಥ ಸೃಷ್ಟಿಶೀಲ ಕಲೆಗಳು, ವಾಸ್ತುವಿನಂಥ ಶಾಸ್ತ್ರಗಳು ಎಲ್ಲವೂ ಇಂಥ ಸಂದರ್ಭಗಳಲ್ಲಿ ಅಭಿವ್ಯಕ್ತಿಗಳನ್ನು ಪಡೆಯುತ್ತವೆ. ಇಲ್ಲೆಲ್ಲ ಕಾರಂತರು ತಮ್ಮ ಪರಿಜ್ಞಾನದೊಂದಿಗೆ ಸೂಕ್ಷ್ಮವಾದ ನಿರೀಕ್ಷಣಾ ಚಾತುರ್ಯವನ್ನು ಬೆರೆಸಿ, ವಿಶಿಷ್ಟವಾದ ಪರಿಣಾಮಗಳನ್ನು ಸಾಧಿಸುತ್ತಾರೆ. ಫತ್ತೇಪುರದ ಬಗೆಗೆ ಅಕ್ಬರನ ವಿಶೇಷವಾದ ಪಗಡೆಯಾಟದ ಬಗೆಗೆ ಅವರು ಪ್ರಾಸಂಗಿಕವಾಗಿ ಪ್ರಸ್ತಾಪಿಸುವ ಕ್ರಮವಾಗಲಿ, ಚೈತ್ಯಾಲಯಗಳ ವಾಸ್ತು ವಿನ್ಯಾಸಗಳ ವಿವರಗಳಾಗಲಿ, ನೃತ್ಯದ ನಡೆಗಳ ಉಲ್ಲೇಖಗಳಾಗಲಿ, ಕೃತಿಗಳ ಶರೀರದೊಳಗೆ ಅಚ್ಚುಕಟ್ಟಾಗಿ ಸೇರಿಕೊಳ್ಳುತ್ತವೆ. ಹಾಗೆಯೇ ಭೂ ಪ್ರದೇಶಗಳ ಬಗೆಗೆ ತಮಗಿರುವ ಮಾಹಿತಿಗಳನ್ನೂ ಕೃಷಿಯಂಥ ವ್ಯವಸಾಯದ ಸೂಕ್ಷ್ಮಗಳನ್ನು, ಪುಸ್ತಕೋದ್ಯಮದ ಅನುಭವಗಳನ್ನು ಅವರು ತಮ್ಮ ಬರಹಗಳಲ್ಲಿ ಬಳಸಿಕೊಳ್ಳುತ್ತಾರೆ "[೪]

ಕಾರಂತರು ತಮಗಿದ್ದ ಅಪಾರವಾದಂತಹ ಅನುಭವವನ್ನು , ತಮ್ಮ ಸೂಕ್ಷ್ಮವಾದ ಗ್ರಹಿಕೆಯ ಚಾತುರ್ಯವನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿದವರು. ಸಾಹಿತ್ಯ ಸಮಾಜದ ಪ್ರತಿಬಿಂಬ ಎಂಬಂತೆ ಹಲವಾರು ಪ್ರಕಾರಗಳ ಮೂಲಕ ಸಾಂಸ್ಕೃತಿಕವಾದ ಪ್ರತಿರೋಧಗಳನ್ನು ಎದುರಿಸುತ್ತಾ ಬಂದರು ಎಂಬ ವಿಚಾರಗಳನ್ನು ಮೇಲಿನ ಉದ್ಧರಣೆಯ ಮಾತುಗಳು ಪೂರಕಗೊಳಿಸುತ್ತವೆ. ಸಾಹಿತ್ಯದಂತೆ ಶಿಕ್ಷಣ ಕ್ಷೇತ್ರದಲ್ಲೂ ಸಹ ಹಲವಾರು ಪ್ರಯೋಗಗಳನ್ನು ನಡೆಸಿದ್ದಾರೆ. ಅವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಿದ್ದೇನೆ.

---

<u>ಅಡಿ ಟಿಪ್ಪಣಿಗಳು :</u>

೧. ನಾಯಕ ಜಿ.ಎಚ್. ; 'ಶಿವರಾಮ ಕಾರಂತ ಸಾಂಸ್ಕೃತಿಕ ಅನುಸಂಧಾನ ', (ಸಮಾರೋಪ ಭಾಷಣದ ಲೇಖನ) ಸಂ. - ಗುರುಲಿಂಗ ಕಾಪಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪುಟ -೧೨೭.

೨. ಮಾಲಿನಿಮಲ್ಯ, 'ಶಿವರಾಮ ಕಾರಂತ ' (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಕನ್ನಡ ಲೇಖಕರ ಮಾಲೆ ) ಸಂ. - ಡಾ. ಹಾ.ಮಾ.ನಾಯಕ ಮತ್ತು ಡಾ.ಪ್ರಧಾನ ಗುರುದತ್ತ, ನವಕರ್ನಾಟಕ ಪ್ರಕಾಶನ, ೨೦೦೭ (ಮೂರನೇ ಮುದ್ರಣ ) ಪುಟ -೩೦.

೩.. ಅಶೋಕ ಟಿ.ಪಿ. ; 'ಶಿವರಾಮ ಕಾರಂತ -ಎರಡು ಅಧ್ಯಯನಗಳು ', ಅಕ್ಷರ ಪ್ರಕಾಶನ, ಹೆಗ್ಗೋಡು -ಸಾಗರ - ಕರ್ನಾಟ, ೧೯೯೨, ಪುಟ -೭೯.

೪. ತಾಳ್ತಜೆ ವಸಂತಕುಮಾರ, 'ಶಿವರಾಮ ಕಾರಂತ ', (ಜ್ಞಾನಪೀಠ ಪ್ರಶಸ್ತಿ ವಿಜೇತರ ಮಾಲಿಕೆ) ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩, ಪುಟ -೧೩೪.

# ಅಧ್ಯಾಯ - ೫

# ಶಿಕ್ಷಣ ಕ್ಷೇತ್ರದಲ್ಲಿನ ಪ್ರಯೋಗಗಳು

" ಮಕ್ಕಳಲ್ಲಿರುವ ಸುಪ್ತ ಶಕ್ತಿಗಳನ್ನು ಹೊರಕ್ಕೆ ತರುವ ಪ್ರಯತ್ನವೇ ಶಿಕ್ಷಣದ ಗುರಿಯೆಂದು ಬಲ್ಲವರು ಹೇಳುತ್ತಾರಾದರೂ, ವಸ್ತುಸ್ಥಿತಿಯಲ್ಲಿ ಇಂದಿನ ಶಿಕ್ಷಣ ಕ್ರಮ ಕೇವಲ ಯಾಂತ್ರಿಕವಾಗಿದೆ. ಅದರಲ್ಲಿ ಮಕ್ಕಳ ಸ್ವಬುದ್ಧಿ , ಸೃಷ್ಟಿ, ಕ್ರಿಯೆ, ವಿಚಾರಶೀಲತೆಗಳ ಬೆಳವಣಿಗೆಗೆ ಸ್ಥಾನವೇ ಇಲ್ಲ "

-ಶಿವರಾಮ ಕಾರಂತ

## ಶಿಕ್ಷಣ ಕ್ಷೇತ್ರದಲ್ಲಿನ ಪ್ರಯೋಗಗಳು

ಪಾಶ್ಚಾತ್ಯ ಸಂಪರ್ಕಕ್ಕೆ ಮುಂಚೆ ನಾಡಿನಲ್ಲಿ ಪ್ರಾಥಮಿಕ ಸ್ವರೂಪದ ಶಿಕ್ಷಣವನ್ನು ನೀಡುವ ಶಾಲೆ (ಮಠ)ಗಳು ಬಹುತರ ಎಲ್ಲಾ ಹಳ್ಳಿಗಳಲ್ಲಿಯೂ ಇದ್ದವು. ಅಲ್ಲಿ ಪಾರಂಪರಿಕ ಪದ್ಧತಿಯ ಪ್ರಕಾರ ಮಣ್ಣಿನ ಅಕ್ಷರ, ಕಡತ, ಹಸ್ತಪ್ರತಿ ಕಂಠಪಾಠ ಮುಂತಾದವುಗಳ ಮೂಲಕ ಮಕ್ಕಳಿಗೆ ಓದು ಮತ್ತು ಬರಹಗಳ ಪರಿಚಯವನ್ನು ಮಾಡಿಕೊಡಲಾಗುತ್ತಿತ್ತು. ಕಾಲಾನಂತರದಲ್ಲಿ ಮಿಶನರಿಗಳ ಆಗಮನ, ಅವರ ಮತಪ್ರಸಾರದ ದೃಷ್ಟಿ , ಅದಕ್ಕಾಗಿ ಮುದ್ರಣ, ಶಿಕ್ಷಣ ರಂಗಗಳಲ್ಲಿ ಅವರು ಮಾಡಿದ ಸುಧಾರಣೆಗಳಿಂದಾಗಿ, ಪ್ರಭಾವಗಳಿಂದಾಗಿ ಶಿಕ್ಷಣ ಕ್ಷೇತ್ರದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಪಾಶ್ಚಾತ್ಯ ವಿದ್ವಾಂಸರು, ಶಿಕ್ಷಣ ತಜ್ಞರ ಪ್ರಭಾವದಿಂದ ನಮ್ಮಲ್ಲೂ ಹೊಸ -ಹೊಸದಾದ ಚಿಂತನಾ ಕ್ರಮಗಳನ್ನು , ಪದ್ಧತಿಗಳನ್ನು ಅಳವಡಿಸಿಕೊಳ್ಳುತ್ತ ಬಂದರು. ಆದರೆ ಇಂದಿಗೂ ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಬಲ್ಲ, ತೃಪ್ತಿದಾಯಕವಾದ, ಪರಿಣಾಮಕಾರಿಯಾದ ಶಿಕ್ಷಣ ಪದ್ಧತಿಯನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ. ನಮ್ಮ ಶಿಕ್ಷಣ ಪದ್ಧತಿಯ ರೀತಿ -ನೀತಿಗಳು, ಪಠ್ಯಕ್ರಮಗಳು, ಅವನ್ನು ಅಳವಡಿಸಿ ಅನುಸರಿಸುವ ಮಾರ್ಗಗಳು, ಅಲ್ಲಿ ಕಂಡುಬರುವ ಕುಂದು ಕೊರತೆಗಳು ಇಂದಿಗೂ ಜಿಜ್ಞಾಸೆಯಿಂದ ಕೂಡಿರುವಂತಹವು. ಅವುಗಳ ಸುಧಾರಣೆಗಾಗಿ ಸರ್ಕಾರಗಳು ಆಯೋಗಗಳನ್ನು ರಚಿಸಿ, ಗೋಷ್ಠಿ - ಕಮ್ಮಟಗಳು, ಚರ್ಚೆಗಳನ್ನು ನಡೆಸುತ್ತಿವೆ. ಆದರೆ ಈ ಕ್ಷೇತ್ರದಲ್ಲಾಗಿರುವ ಸುಧಾರಣೆಗಳು ಮಾತ್ರ ಇನ್ನೂ ತೃಪ್ತಿಕರವಾಗಿಲ್ಲ. ಅದರಲ್ಲೂ ಶಿಕ್ಷಣ ಕ್ಷೇತ್ರದಲ್ಲಿ ಅಡಿಪಾಯವನ್ನು ಒದಗಿಸುವ ಪ್ರಾಥಮಿಕ ಹಂತದ ಶಿಕ್ಷಣ ರಂಗದಲ್ಲಿ ನಿರಂತರವಾದಂತಹ ಪ್ರಯೋಗಗಳು ನಡೆಯುತ್ತಲೇ ಇವೆ. ಕಾರಂತರು ಶಿಕ್ಷಕರಲ್ಲದಿದ್ದರೂ ಕ್ರಿಶ. ೧೯೩೧ ನೇ ಇಸವಿಯಷ್ಟು ಹಿಂದೆಯೇ ಮಕ್ಕಳಿಗಾಗಿ ವಿಶೇಷವಾದ ಶಿಕ್ಷಣದ ಶಿಬಿರಗಳನ್ನು ಏರ್ಪಡಿಸಿ, 'ಬಾಲವನ'ವನ್ನು ಸ್ಥಾಪಿಸಿ, ಪಠ್ಯರಚನೆಯ ಚಿಂತನೆ, ಕಲಿಕೆಯ ಹೊಸ -ಹೊಸ ವಿಧಾನಗಳು, ಶಿಕ್ಷಕರಿಗೂ ತರಬೇತಿ ಮುಂತಾದ ಶೈಕ್ಷಣಿಕವಾದ ಪ್ರಯೋಗಗಳನ್ನು ನಡೆಸಿದವರು. ಮೂವತ್ತರ ದಶಕದ ಅವರ ಪ್ರಯೋಗಗಳು, ಚಿಂತನೆಗಳು ಇಂದಿಗೂ ಪ್ರಸ್ತುತವೆನಿಸುತ್ತವೆ, ಅನುಕರಣೀಯವಾಗಿವೆ.

“ ಅತ್ಯಾವಶ್ಯಕವೆಷ್ಟು ಕೇವಲ ಅಷ್ಟರಲ್ಲೇ ಸೆರೆಯಾಗಿರುವುದು ಮನುಷ್ಯರ ಬಾಳುವೆಯ ಧರ್ಮವಲ್ಲ. ನಾವು ತಕ್ಕಮಟ್ಟಿಗೆ ಅವಶ್ಯಕತೆಯ ಸಂಕೋಲೆಯಲ್ಲಿ ಬದ್ಧರಾಗಿರುತ್ತೇವೆ. ಒಂದು ಅಳತೆಯಲ್ಲಿ ಸ್ವಾಧೀನರಾಗಿಯೂ ಇದ್ದೇವೆ. ನಮ್ಮ ದೇಹ ಮೂರುವರೆ ಮೊಳದಲ್ಲಿ ಅಡಗಿದ್ದು, ಹಾಗೆಂದು ಸರಿಯಾಗಿ ಅಳತೆ ಮಾಡಿ ಅದೇ ಮೂರುವರೆ ಮೊಳದಲ್ಲಿ ಮನೆ ಕಟ್ಟಿದರೆ ನಡೆಯದು. ಅಡ್ಡಿಯಿಲ್ಲದೆ ಓಡಾಡಲು ಬೇಕಾದಷ್ಟು ಸ್ಥಳವನ್ನು ಬಿಟ್ಟಿರುವುದು ಅವಶ್ಯಕ. ಇಲ್ಲದಿದ್ದರೆ ನಮ್ಮ ಆರೋಗ್ಯಕ್ಕೂ , ಆನಂದಕ್ಕೂ ಆತಂಕ ಉಂಟಾಗುತ್ತದೆ. ಶಿಕ್ಷಣದ ವಿಷಯದಲ್ಲೂ ಈ ಮಾತು ಒಪ್ಪುತ್ತದೆ. ಕೇವಲ ಎಷ್ಟು ಮಾತ್ರ ಶಿಕ್ಷಣ ಅತ್ಯಾವಶ್ಯಕವೋ ಅಷ್ಟರಲ್ಲಿಯೇ ಮಕ್ಕಳನ್ನು ಪೂರ್ತಿ ಸೆರೆಯಿಟ್ಟರೆ ಅವರ ಮನಸ್ಸು ಎಂದಿಗೂ ಯಥೇಚ್ಛವಾಗಿ ಬೆಳೆಯಲಾರದು. ಅತ್ಯಾವಶ್ಯಕವಾದ ಶಿಕ್ಷಣದೊಡನೆ ಮಕ್ಕಳಿಗೆ ಇಷ್ಟವಾದ ಓದನ್ನು ಸೇರಿಸದೆ ಹೋದರೆ ಹುಡುಗನು ಒಳ್ಳೆಯ ಮನುಷ್ಯನಾಗಿ ಬೆಳೆಯಲಾರನು. ವಯಸ್ಕನಿಂದಲೂ ಬುದ್ಧಿವೃತ್ತಿಯ ವಿಷಯದಲ್ಲಿ ಅವನು ಹುಡುಗನಾಗಿಯೇ ಉಳಿಯುತ್ತಾನೆ.”[9]

ಮಕ್ಕಳಿಗೆ ತರಗತಿಗಳಲ್ಲಿ ಕೇವಲ ಪಠ್ಯಗಳನ್ನು ಮಾತ್ರ ಬೋಧಿಸುತ್ತ , ಸಾಮಾಜಿಕವಾಗಿ ಅವಶ್ಯವಾದ ಶಿಕ್ಷಣವನ್ನು ನೀಡದೆ, ಪಠ್ಯೇತರವಾದ ಚಟುವಟಿಕೆಗಳಲ್ಲಿ ಅವರನ್ನು ತೊಡಗಿಸಿ ಕಲಿಕೆಗೆ ಪೂರಕವಾದ ವ್ಯಕ್ತಿತ್ವ ವಿಕಸನಕ್ಕೆ ಸಹಕಾರಿಯಾದ ವಾತಾವರಣವು ಶೈಕ್ಷಣಿಕ ಕ್ಷೇತ್ರದಲ್ಲಿ ನಡೆಯದೆ ಹೋದರೆ ಮಕ್ಕಳು ಮನುಷ್ಯರಾಗಿ ಬೆಳೆಯಲಾರರು ಎಂಬ ವಿಚಾರವಾಗಿ ರವೀಂದ್ರನಾಥ ಠಾಗೂರ್‌ರವರ ಮೇಲಿನ ಉದ್ದರಣೆಯ ಮಾತುಗಳು ಕಾರಂತರ ಶಿಕ್ಷಣ ಕ್ಷೇತ್ರದ ಕಾರ್ಯಚಟುವಟಿಕೆ ಗಳನ್ನು ಅವರು ಸಾಧಿಸಲು ಹೊರಟ ಒತ್ತಾಸೆಗಳನ್ನು ಸಮರ್ಥಿಸುತ್ತವೆ.

ಮಕ್ಕಳ ಬಹುಮುಖವಾದ ಸಮಗ್ರ ವ್ಯಕ್ತಿತ್ವ ವಿಕಸನಕ್ಕೆ ಕೇವಲ ನಾಲ್ಕು ಗೋಡೆಗಳ ನಡುವೆ ನಡೆಯುವ ಕಲಿಕೆಯು ಅಷ್ಟೊಂದು ಪರಿಣಾಮಕಾರಿಯಾದುದಲ್ಲ ಎಂಬುದನ್ನು ಕಾರಂತರು ಮನಗಂಡಿದ್ದರು. ಅವರ ಎಲ್ಲಾ ಕಾರ್ಯಗಳಿಗೂ ತುಂಬು ಹೃದಯದ ಪ್ರೋತ್ಸಾಹವನ್ನು ನೀಡುತ್ತ ಬಂದಿದ್ದ ಮೊಳಹಳ್ಳಿ ಶಿವರಾಯರ ಸಹಾಯ -ಸಹಕಾರದಿಂದಾಗಿ ೧೯೩೦ ರಲ್ಲಿ ಉಪ್ಪಿನಂಗಡಿಯಲ್ಲಿ ಮೊದಲ ಮಕ್ಕಳ ಕೂಟವನ್ನು ಏರ್ಪಡಿಸಿದರು. ಶಿಬಿರಾರ್ಥಿಗಳಾಗಿ ಸುಮಾರು ಅರವತ್ತು ಮಂದಿ ಮಕ್ಕಳು ಇದರಲ್ಲಿ ಭಾಗವಹಿಸಿದ್ದರು. ವಿವಿಧ ಬಗೆಯ ಕ್ರಿಯಾತ್ಮಕ ಶಕ್ತಿಗಳಲ್ಲಿ ಅವರನ್ನು ತೊಡಗಿಸಿ ಎಲ್ಲರೂ ಆಶ್ಚರ್ಯಪಡುವಂತ ಬದಲಾವಣೆಗಳನ್ನು ತಂದಿದ್ದರು. ಇಂದು ನಾವು ಮಕ್ಕಳಲ್ಲಿ ಅತ್ಯಾವಶ್ಯಕವಾಗಿ ಮೂಡಿಸಲೇಬೇಕಾಗಿರುವ ಸಹಬಾಳ್ವೆ ಸರ್ವಧರ್ಮ ಸಮನ್ವಯತೆ, ನಾಯಕತ್ವದ

ಗುಣಗಳು ಮುಂತಾದವುಗಳನ್ನು ಕಾರಂತರು ಈ ಶಿಬಿರಗಳಿಂದ ಮೂಡಿಸಿದ್ದರು. ಇಂಥ ಕೂಟಗಳನ್ನು ಸುಮಾರು ಐದು ವರ್ಷಗಳ ಕಾಲ ನಡೆಸಿದರು. ನಂತರದಲ್ಲಿ ತಾಲ್ಲೂಕು ಬೋರ್ಡುಗಳು ಅಳಿದು ಜಿಲ್ಲಾ ಬೋರ್ಡುಗಳ ಆಡಳಿತಕ್ಕೆ ಶಾಲೆಗಳು ಒಳಪಟ್ಟಾಗ ಅಲ್ಲಿನ ಅಸಹಕಾರದಿಂದ ಈ ಪ್ರಯೋಗಗಳನ್ನು ನಿಲ್ಲಿಸಿದ್ದು ದುರ್ದೈವದ ಸಂಗತಿ. ಪಂಜೆ ಮಂಗೇಶರಾಯರ ಸಹಕಾರದೊಂದಿಗೆ ೧೯೩೨ ರಲ್ಲಿ ಬೇಸಿಗೆ ರಜೆಯಲ್ಲಿ ಮಂಗಳೂರಿನಲ್ಲಿ (Educational Week) ' ಶಿಕ್ಷಣ ವಾರ ' ಎಂಬ Refresher Course ಮಾದರಿಯಲ್ಲಿ ಮಕ್ಕಳನ್ನು ತರಬೇತುಗೊಳಿಸುವ ಶಿಕ್ಷಕರಿಗೂ ಉಪನ್ಯಾಸಗಳನ್ನು ಏರ್ಪಡಿಸಿ ಜೊತೆಗೆ ಮನರಂಜನೆಯೇ ಪ್ರಧಾನವಾಗಿದ್ದ 'ನಾಟಕವೆಂಬ ನಾಟಕ', 'ತಿಮ್ಮಪ್ಪನ ಒಗ್ಗರಣೆ ', 'ಮುಕ್ತದ್ವಾರ ', 'ಬೌದ್ಧಯಾತ್ರೆ ' ಎಂಬ ನಾಟಕಗಳನ್ನು ಬರೆದು ಪ್ರಯೋಗಿಸಿದರು. ಜಪಾನ್, ಈಜಿಪ್ಟ್ ದೇಶಗಳ ಪೇಜೆಂಟ್ ಅಥವಾ ದೃಶ್ಯಾವಳಿಗಳನ್ನು ತೋರಿಸಿದರು.

ಭಾಷೆಯನ್ನು ಕಲಿಸಲು ತಕ್ಕ ಆಟಗಳನ್ನು ಸಿದ್ಧಗೊಳಿಸಿ, ಕಲಿಯಲು ಬೇಕಾದ ವಿವಿಧ ಕಾರ್ಡು, ಚಿತ್ರಗಳನ್ನೆಲ್ಲಾ ಮುದ್ರಿಸಿ, ಇಸ್ಪೀಟಿನಂತಹ ಸಚಿತ್ರ ಕಾರ್ಡುಗಳ ಸಹಾಯದಿಂದ -ಗಣಿತ, ವಸ್ತುಪಾಠ, ಭಾಷಾಪಾಠಗಳನ್ನು ನಾವು ಹೇಗೆ ಮಾಡಬಹುದು ಎಂಬ ಪ್ರಯೋಗಗಳನ್ನು ಶಾಲೆಗಳಲ್ಲಿ ಸಲಕರಣೆಗಳ ಸಮೇತ ತಿಳಿಸಿಕೊಟ್ಟರು. ಮಕ್ಕಳ ಮನಸ್ಸು, ಅವರ ಅಭಿರುಚಿ - ಆಸಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ಮಕ್ಕಳ ಲೋಕಕ್ಕೆ ಸಂಬಂಧಿಸಿದ ತಮ್ಮ ವಿಶಿಷ್ಟವಾದ ಪ್ರಯೋಗಗಳನ್ನು ಇನ್ನೂ ವಿಸ್ತೃತವಾಗಿ, ಪರಿಣಾಮಕಾರಿಯಾಗಿ ಮಾಡಬೇಕೆಂಬ ಆಸೆಯಿಂದ 'ನೋಡಿ ಕಲಿ, ಮಾಡಿ ತಿಳಿ' ಎಂಬ ತತ್ವಗಳ ಆಧಾರದ ಮೇಲೆ ೧೯೩೫ ರಲ್ಲಿ 'ಕಿಂಡರ್ ಗಾರ್ಟನ್' ಎಂಬ ಅರ್ಥದಲ್ಲಿ 'ಬಾಲವನ 'ವನ್ನು ಸ್ಥಾಪಿಸಿದರು. ಹಸುಬ, ನವಿಲು, ಜಿಂಕೆ, ಮಂಗ, ಹಾವು, ಹೆಬ್ಬಾವುಗಳನ್ನೊಳಗೊಂಡ ಒಂದು ಪುಟ್ಟ ಮೃಗಾಲಯವನ್ನು ಬಾಲವನದ ಆವರಣದಲ್ಲಿ ಅನಾವರಣಗೊಳಿಸಿದರು. ಅಲ್ಲಿ ಕಲಿಯುವುದಕ್ಕೆಂದು ಬರದಿದ್ದರೂ, ಆಟವಾಡುವುದಕ್ಕೆ, ಪ್ರಾಣಿಗಳನ್ನು ನೋಡುವುದಕ್ಕೆ ಊಟ ಮಾಡುವುದಕ್ಕೆ ಮಕ್ಕಳು ಜಮಾಯಿಸುತ್ತಿದ್ದರು. ತಮ್ಮದೇ ಆದ ವಿಶಿಷ್ಟ ಚಿಂತನೆಗಳಿಂದ ಪ್ರಾರಂಭವಾದ 'ಬಾಲವನ' ಮುಂದೆ ಅನ್ನಛತ್ರವಾಯಿತು. ಸರಿಯಾದ ನಿರ್ವಹಣೆ ಇಲ್ಲದೆ ಪ್ರಾಣಿಗಳೂ ಸೊರಗಿದವು. ನಂತರದಲ್ಲಿ ಅದನ್ನು ಮುಚ್ಚಿಬಿಟ್ಟರು. ರವೀಂದ್ರನಾಥ ಟ್ಯಾಗೂರರ 'ಶಾಂತಿನಿಕೇತನ' ವಿಶ್ವವಿದ್ಯಾಲಯವಾಗಿ ಪ್ರಸಿದ್ಧಿ ಪಡೆಯಲು ಸಹಕಾರಿಯಾದ ಜನಪ್ರಿಯತೆಯ ಲೋಕ ಮನ್ನಣೆಯಾಗಲೀ, ಆರ್ಥಿಕ ವ್ಯವಸ್ಥೆಯಾಗಲೀ ಕಾರಂತರಿಗೆ ಇಲ್ಲವಾದುದರಿಂದ ಅವರ 'ಬಾಲವನ'ದ ಮೂಲಕ ಕಂಡಂತಹ ಕನಸುಗಳೆಲ್ಲಾ ಸಾಕಾರವಾಗಲು ಸಾಧ್ಯವಾಗಲಿಲ್ಲ.

"ಮಕ್ಕಳಲ್ಲಿರುವ ಸುಪ್ತ ಶಕ್ತಿಗಳನ್ನು ಹೊರಕ್ಕೆ ತರುವ ಪ್ರಯತ್ನವೇ ಶಿಕ್ಷಣದ ಗುರಿಯೆಂದು ಬಲ್ಲವರು ಹೇಳುತ್ತಾರಾದರೂ ವಸ್ತುಸ್ಥಿತಿಯಲ್ಲಿ ಇಂದಿನ ಶಿಕ್ಷಣ ಕ್ರಮ ಕೇವಲ ಯಾಂತ್ರಿಕವಾಗಿದೆ. ಅದರಲ್ಲಿ ಮಕ್ಕಳ ಸ್ವಬುದ್ಧಿ , ಸೃಷ್ಟಿ ಕ್ರಿಯೆ, ವಿಚಾರಶೀಲತೆಗಳ ಬೆಳವಣಿಗೆಗೆ ಸ್ಥಾನವೇ ಇಲ್ಲ ಇವನ್ನು ಆಧುನಿಕ ಕ್ರಮಗಳಿಂದ ಬೆಳೆಸಬಹುದೆಂದು ಮನಸ್ಸಿಗನಿಸುತ್ತಿತ್ತು. ಮಕ್ಕಳ ಕೂಟಗಳನ್ನು ಜರುಗಿಸಿ, ನಮ್ಮ ಬಾಲಕರಲ್ಲಿಯೂ ಬಹುಮುಖವಾದ ಪ್ರತಿಭೆಯಿದೆ ಎಂಬುದನ್ನು ಕಂಡುಕೊಂಡಿದ್ದೆ. ಅವನ್ನು ಹೊರಕ್ಕೆ ತರಲು 'ಆಟ'ವೂ ಒಂದು ಶಿಕ್ಷಣ ಸಾಧನವಾಗಬಲ್ಲುದೆಂದೂ ಅನಿಸಿತ್ತು. ಈ ಆಟಗಳನ್ನು ನಮ್ಮ ಉದ್ದೇಶಕ್ಕೆ ಸರಿಯಾಗಿ ಏರ್ಪಡಿಸಬೇಕಾದರೆ ಶಿಕ್ಷಕನು ತುಂಬಾ ಶ್ರಮಿಸಬೇಕು. 'ಎಷ್ಟೆಲ್ಲ ದಾರಿಗಳಿಂದ ಆ ಕೆಲಸವನ್ನು ಮಾಡಬಹುದು ' ಎಂಬುದನ್ನು ನಾನು ಪ್ರಯೋಗಗಳ ಮೂಲಕ ಕಂಡುಕೊಂಡಿದ್ದರೂ ಪ್ರಯೋಜನವೇನು ? ನನ್ನ ಶಾಲೆ ನಡೆಯದೆ ಹೋಯಿತು. ಪಠ್ಯ ಕ್ರಮವನ್ನೇ ದೈವವೆಂದು ತಿಳಿದ ಸಾರ್ವಜನಿಕ ಶಾಲೆಗಳಲ್ಲಿಯೂ ಆ ಪಠ್ಯಕ್ರಮವನ್ನು ಮಕ್ಕಳಿಗೆ ಆಕರ್ಷಕವಾಗುವಂತೆ ಮಾಡಲು ಬರುತ್ತದೆಂದು ಪ್ರತ್ಯಕ್ಷ ಪ್ರಯೋಗಗಳಿಂದ ನಿರ್ದೇಶಿಸಿದರೂ ಶಿಕ್ಷಕರಲ್ಲಿ ಹೆಚ್ಚಿನವರಿಗೆ - ಅವೆಲ್ಲ ಶ್ರಮದಾಯಕ ಎನಿಸತೊಡಗಿತು. ಯಾರೂ ಮಕ್ಕಳ ಶಿಕ್ಷಣದ ಸಲುವಾಗಿ ಶ್ರಮಿಸಲು ಸಿದ್ಧರಿಲ್ಲ. ಪಠ್ಯ ಪುಸ್ತಕಗಳನ್ನು ಮಕ್ಕಳಿಗಿಂತ ಮುಂದಾಗಿ ಓದಿಕೊಳ್ಳುವ, ಇಲ್ಲವೆ ಅವರ ಜೊತೆಗೇನೆ ಅವನ್ನು ಓದಿಬಿಡುವ ಕೆಲಸ ಸುಲಭದ್ದು. ಪುಸ್ತಕಗಳಲ್ಲಿ ಬರೆದಿರುವ ಪ್ರಶ್ನೆಗಳನ್ನೇ ಮಕ್ಕಳಿಗೆ ಕೇಳಿದರೆ ಏನೇನೂ ಶ್ರಮವಿಲ್ಲ. ಈ ತೆರನ ಸುಲಭ ಮಾರ್ಗವೇ ಅವರಿಗೆ ಬೇಕಾಗಿದೆ. ಹೆಚ್ಚಿನ ಪ್ರಯತ್ನ ಮಾಡುವ ಬದಲು 'ಅವರು ಕೊಡುವ ಸಂಬಳಕ್ಕೆ ಇದೇ ಹೆಚ್ಚು ' ಎಂದವರೂ ಉಂಟು"[೨]

ಯಾಂತ್ರಿಕವಾದ ಇಂದಿನ ಶಿಕ್ಷಣ ಕ್ರಮವನ್ನು , ಶಿಕ್ಷಕರ ಅನಾಸಕ್ತಿಯನ್ನು , ಅದಕ್ಕಾಗಿ ಅವರು ನಡೆಸಿದ ಅನೇಕ ಪ್ರಯೋಗಗಳನ್ನು ತಮ್ಮ ಆತ್ಮಕಥಾನಕವಾದ -'ಹುಚ್ಚು ಮನಸ್ಸಿನ ಹತ್ತು ಮುಖ'ಗಳಲ್ಲಿ ಈ ರೀತಿಯಾಗಿ ಹೇಳಿಕೊಂಡಿದ್ದಾರೆ. ಹಲವು ವಿಷಯಗಳಲ್ಲಿ ಮಕ್ಕಳ ಪಾಠಗಳ ವಿವರಗಳನ್ನು ಕುರಿತು ಚಿಂತಿಸುತ್ತ, ಪ್ರಯೋಗಗಳನ್ನು ನಡೆಸುತ್ತಿದ್ದ ಕಾರಂತರಿಗೆ ಈ ವಿಷಯದಲ್ಲಿ ಸಾರ್ವಜನಿಕವಾದ ಅನಾಸಕ್ತಿಯಿಂದಾಗಿ ಬೇಸರವಾದರೂ ಸಹ ಎಂದೂ ಸುಮ್ಮನಿದ್ದವರಲ್ಲ. ಭಾಷಾ ಶಿಕ್ಷಣದಲ್ಲಿ - ಅಕ್ಷರ ಬೋಧನೆಯಿಂದ ಗ್ರಹಣಶಕ್ತಿಗೆ ಹಾನಿಯಿರುವುದನ್ನು ತಿಳಿದು, ವಾಕ್ಯಗಳನ್ನು ಹೇಳಿಕೊಡುವ ಬೆಲಾರ್ಡನ ಮಾದರಿಯಲ್ಲಿ ವಾಕ್ಯ ಬೋಧನೆಯ ಮೂಲಕ ಕಲಿಕೆಯನ್ನು ತರಲು ಪ್ರಯತ್ನಿಸಿದರು. ಈ ಸಂದರ್ಭದಲ್ಲಿ 'ಸಿರಿಗನ್ನಡ ಪಾಠಮಾಲೆ ' ಎಂಬ ಹೆಸರಲ್ಲಿ ಏಳು ಪುಸ್ತಕಗಳನ್ನು ಪ್ರಕಟಿಸಿದರು. ಇವುಗಳಲ್ಲಿ ಭಾಷೆಯ ಚೆಲುವಿನ ಕಡೆಗೆ, ನಾದ ತರಂಗಿತೆಯ

ಕಡೆಗೆ ವಿಶೇಷ ಗಮನವನ್ನಿರಿಸಿ ಪದ್ಯದಂತಹ ಗದ್ಯಶೈಲಿಯ ಈ ಪುಸ್ತಕಗಳು ಹಲವಾರು ಶಿಕ್ಷಣ ಪ್ರಿಯರ ಮೆಚ್ಚುಗೆಯನ್ನು ಗಳಿಸಿದವು. ಆದರೆ ಇದನ್ನು ಶಾಲೆಗಳು ಉಪಯೋಗಿಸುವಂತೆ ಮಾಡುವುದಕ್ಕಾಗಿ ಅಧಿಕಾರಿಗಳ, ಅಧಿಕಾರಸ್ಥರ ಮನೆ ಬಾಗಿಲುಗಳಿಗೆ ಹೋಗುವುದು ಅವಶ್ಯವಾದಾಗ ಆ ಕೆಲಸವನ್ನು ಮಾಡಲು ಇಚ್ಚಿಸದ ಕಾರಂತರ ಪ್ರಯತ್ನ ಈ ವಿಚಾರದಲ್ಲಿ ಸ್ಥಗಿತವಾಯಿತು.

ವಯಸ್ಕರಿಗಾಗಿ ಯಾವ ರೀತಿಯ ಶಿಕ್ಷಣ ಕ್ರಮವನ್ನು ಬಳಸಬೇಕೆಂದು ಯುನೆಸ್ಕೋ ಸಂಸ್ಥೆಯವರು ಪ್ರಯೋಗಗಳಿಂದ ತೀರ್ಮಾನಿಸಲು ೧೯೫೩ ರಲ್ಲಿ ಮೈಸೂರಿನ ಯಳವಾಲ ಎಂಬಲ್ಲಿ ನಿಯೋಜಿತ ಒಂದು ಸಂಶೋಧಕರ ತರಬೇತಿಯ ಶಿಬಿರವನ್ನು ಆಯೋಜಿಸಿದ್ದರು. ಯಾವುದಾದರೂ ಒಂದು ಸಾಮಾಜಿಕ ಪ್ರಶ್ನೆಯನ್ನು ಎತ್ತಿಕೊಂಡು ಅದನ್ನು ಭಾಷೆಯ ಮೂಲಕ, ರೇಡಿಯೋ ಮೂಲಕ, ಚಿತ್ರ, ಚಲನಚಿತ್ರಗಳ ಮೂಲಕ ಹೇಗೆ ತೋರಿಸಬಹುದು- ಎಂದು ಪ್ರಯೋಗಗಳಿಂದ ತಿಳಿದುಕೊಳ್ಳುವುದು ಅವರ ಪ್ರಯತ್ನವಾಗಿತ್ತು. ಅವರು ಈ ರೀತಿ ತಯಾರಿಸಿದ ಶಿಕ್ಷಣ ಸಾಧನಗಳನ್ನು ಹಳ್ಳಿಯ ಜನರ ಮುಂದಿರಿಸಿ ಅವುಗಳಿಂದ ಅವರ ಮೇಲೆ ಯಾವೆಲ್ಲಾ ಪರಿಣಾಮ ಉಂಟಾಯಿತು - ಎಂದು ಪ್ರತ್ಯಕ್ಷ ಅಳೆದು ಆ ಮೂಲಕ ತಮ್ಮ ಶಿಕ್ಷಣ ಕ್ರಮವನ್ನು ಬೇಕಾದ ರೀತಿಯಲ್ಲಿ ತಿದ್ದಿಕೊಳ್ಳಲು ಅವರು ಸಿದ್ದರಾಗಿದ್ದರು. ಆ ಸಂದರ್ಭದಲ್ಲಿ ವಯಸ್ಕರಿಗಾಗಿ 'ಜೋಗಿ ಕಂಡ ಊರು', 'ದೇವ ಒಲಿದ ಊರು ' ಎಂಬ ಹೊಸ ಮಾದರಿಯ ಪುಸ್ತಕಗಳನ್ನು ಬರೆದರು. ಓದುಗರಿಗೆ ಪರಿಚಿತವಾದ ತೀರ ಸಣ್ಣ ಸಣ್ಣ ಶಬ್ದಗಳನ್ನೆ ಬಳಸಿ, ಅವುಗಳನ್ನು ಆವರ್ತನೆಯಿಂದ ಉಪಯೋಗಿಸಿ, ಕಥೆ ಬೇಸರ ತರಿಸದೆ ನೆನಪಿನಲ್ಲಿ ಉಳಿಯುವಂತೆ, ೧೦೦-೨೦೦ ಶಬ್ದಗಳಿಗಿಂತ ಹೆಚ್ಚಿಗೆ ಬಳಸದೆ ಕ್ಲಿಷ್ಟ ಶಬ್ದಗಳ ಭಯವನ್ನು ದೂರ ಮಾಡಿ ಆಕರ್ಷಕವಾದ ಇವು ವಿಶಿಷ್ಟವಾಗಿದ್ದವು. ಆದರೆ ಶಿಕ್ಷಣ ಇಲಾಖೆಗಳ ಅವಾಂತರಗಳಿಂದ ಅವೂ ಪೂರ್ಣ ಪ್ರಮಾಣದಲ್ಲಿ ಸಾಕಾರಗೊಳ್ಳದೆ ಹೋದವು.

ದಕ್ಷಿಣ ಭಾರತದ ಕನ್ನಡ, ತೆಲುಗು, ತಮಿಳು, ಮಲೆಯಾಳ ಪ್ರಾಂತ್ಯಗಳ ಮಕ್ಕಳ ಪುಸ್ತಕಗಳ ಲೇಖಕರ, ಚಿತ್ರಕಾರರ ಮತ್ತು ಮುದ್ರಕರ ಒಂದು ಸಮ್ಮೇಳನವನ್ನು ದಕ್ಷಿಣ ದೇಶದ ಭಾಷಾ ಸಂಸ್ಥೆಯವರು ಬೆಂಗಳೂರಿನಲ್ಲಿ ನಡೆಸಿದಂತಹ ಸಂದರ್ಭದಲ್ಲಿ ಅದರ ನಿರ್ದೇಶಕತ್ವವನ್ನು ಕಾರಂತರಿಗೆ ವಹಿಸಲಾಗಿತ್ತು. ಇಲ್ಲಿ ಮಕ್ಕಳ ಸಾಹಿತ್ಯದ ಬಗೆಗೆ, ಅದರ ಸಾಧಕ -ಬಾಧಕಗಳನ್ನು ಕುರಿತು ಕೆಲವು ಸೈದ್ಧಾಂತಿಕವಾದ ನಿಲುವುಗಳನ್ನು ಸ್ಪಷ್ಟಪಡಿಸಲಾಯಿತು. ಆದರೆ ಅವುಗಳ ಅಳವಡಿಕೆಯು ಮಾತ್ರ ಸಾಧ್ಯವಾಗಲಿಲ್ಲ, ನಮ್ಮಲ್ಲಿರುವ ಪಠ್ಯ ಪುಸ್ತಕಗಳಲ್ಲಿನ, ಮಕ್ಕಳ ಗ್ರಂಥಗಳಲ್ಲಿನ ನೀರಸವಾದ ಬರವಣಿಗೆಯನ್ನು ಕಂಡು ಭೂಗೋಲದಂತಹ ರುಚಿಕರ ವಿಷಯವನ್ನು ನೀರಸವಾಗಿ ಬರೆಯುವ

ವಿಧಾನವನ್ನು ನೋಡಿ ಚೆಲುವ ನಾಡಿನ ಕಥೆಯನ್ನು ಚಿತ್ರಗಳ ಮೂಲಕ ಭೂವಿವರಣೆ ತಿಳಿಸುವ ಪ್ರಯತ್ನವನ್ನು ಮಾಡಿದರು. ಅದಕ್ಕಾಗಿ ಬೆಟ್ಟಗಳು, ನದಿಗಳು, ಪ್ರಾಣಿಗಳು, ಮತಗಳು, ವ್ಯಾಪಾರ, ವಾಹನಗಳು, ಉದ್ಯೋಗ, ಕೈಗಾರಿಕೆ ಇವನ್ನು ಕುರಿತು ಚಿತ್ರರೂಪದಲ್ಲಿ ಕೊಡಲು ಯೋಚಿಸಿ ಫೋಟೋಗಳನ್ನು ಸಂಗ್ರಹಿಸಿ ಅವಕ್ಕೆ ಸಮವಾದ ಪ್ರವಾಸ ರೀತಿಯ (Travelogue)ಕಥಾನಕವನ್ನು ಬರೆದು ಚಿತ್ರಗಳು ಚೆನ್ನಾಗಿರುವಾಗ ಅಚ್ಚೂ ಚೆನ್ನಾಗಿರಬೇಕೆಂದು ಬಾಸೆಲ್ ಮಿಷನ್ ಪ್ರಕಾಶ ಮಂದಿರದವರ ಮೂಲಕ ಜರ್ಮನಿಯಲ್ಲಿ ಆ ಪುಸ್ತಕದ ಚಿತ್ರಗಳ ಹಾಳೆಗಳನ್ನು ಗ್ರೆವ್ಯೂರಿಯಿಂದ ಮುದ್ರಿಸಿ 'ಚಿತ್ರಮಯ ದಕ್ಷಿಣ ಕನ್ನಡ ' ಎಂಬ ಸುಂದರವಾದ ಪುಸ್ತಕವನ್ನು ಹೊರತಂದರು.

ಕನ್ನಡದಲ್ಲಿ ವಿಶ್ವಕೋಶ ಮಾದರಿಯ ಗ್ರಂಥಗಳ ಕೊರತೆಯನ್ನು ಕಂಡ ಕಾರಂತರು ಇಂಗ್ಲಿಷ್‌ನ ಆರ್ಥರ್ ಮೀರವರ -Children's Encyclopaedia George Newns ಕಂಪೆನಿಯವರ - 'Pictorial Knowledge' ಮುಂತಾದ ಗ್ರಂಥಗಳ ಪ್ರಭಾವದಿಂದ ಬಹಳಷ್ಟು ಶ್ರಮ ವಹಿಸಿ ಆರುನೂರು ಪುಟಗಳ ಮೂರು ಸಂಪುಟಗಳುಳ್ಳ ದೇಶಭಾಷೆಯಲ್ಲಿಯೇ ಮೊದಲ ಬಾರಿಗೆ ಮಕ್ಕಳ ಬೃಹತ್ ವಿಶ್ವಕೋಶ 'ಬಾಲ ಪ್ರಪಂಚ'ದಲ್ಲಿ ೧೯೩೬ ರಲ್ಲೇ ಪ್ರಕಟಿಸಿದರು. ಹಾಗೆಯೇ ಜನಸಾಮಾನ್ಯರಿಗೆ ವಿಜ್ಞಾನದ ಪರಿಚಯವನ್ನು ಮಾಡಿಕೊಡುವ ಸಲುವಾಗಿ ವಿಜ್ಞಾನ ವಿಷಯಗಳಿಗೆ ಸಂಬಂಧಿಸಿದಂತೆ ಐನೂರು ಪುಟಗಳ ನಾಲ್ಕು ಸಂಪುಟಗಳನ್ನೊಳಗೊಂಡ 'ವಿಜ್ಞಾನ ಪ್ರಪಂಚ'ವನ್ನು ಪ್ರಕಟಿಸಿದರು. ಮಕ್ಕಳಿಗಾಗಿಯೇ ೨೩೧ ಕೃತಿಗಳನ್ನು ರಚಿಸಿದ್ದಾರೆ.

ಪ್ರಯೋಗಶೀಲರಾದ ಕಾರಂತರು ಶಿಕ್ಷಣದಲ್ಲಿ, ಪ್ರಾಥಮಿಕ ಶಾಲೆಗಳ ಶಿಕ್ಷಣ ಮಟ್ಟದಲ್ಲಿ , ವಿದ್ಯಾರ್ಥಿಗಳಲ್ಲಿ , ಅವರನ್ನು ಕ್ರಿಯಾಶೀಲಗೊಳಿಸುವ ಶಿಕ್ಷಕರನ್ನು ಕುರಿತು ತಮ್ಮದೇ ಆದ ಚಿಂತನೆಗಳ ಮೂಲಕ ಸುಧಾರಣೆಯನ್ನು ತರಲು ಪ್ರಯತ್ನಿಸಿದರು. ಅವರ ಸೋಲು -ಗೆಲುವುಗಳು ಈ ವಿಚಾರದಲ್ಲಿ ಏನೇ ಇದ್ದರೂ ಅವರ ಯೋಚನಾ ಲಹರಿ, ಅವರ ಶ್ರಮ, ಜಾಗತಿಕವಾದ ಗ್ರಹಿಕೆಗಳು ಮಹತ್ವವನ್ನು ಪಡೆದುಕೊಳ್ಳುತ್ತವೆ. ಆದರೆ ನಮ್ಮ ಈ ಶಿಕ್ಷಣ ಕ್ಷೇತ್ರದಲ್ಲಿನ ಬಿಲ್ಲು-ಬೆಲ್ ಘಾಲಿಸಿ, ಪಠ್ಯಕ್ರಮಕ್ಕೆ ಸೀಮಿತವಾದ ಸೋಮಾರಿತನ, ಶ್ರಮ ಸಂಸ್ಕೃತಿಯ ಬಗೆಗಿನ ನಿರ್ಲಕ್ಷ್ಯ, ಹೊಸತನ್ನು ಯೋಚಿಸಿ ಸ್ವೀಕರಿಸದೆ ಪ್ರತಿರೋಧಿಸುವ ಸಂಕುಚಿತ ಮನೋಭಾವ ಇವೆಲ್ಲವೂ ಕಾರಂತರ ಪ್ರಯೋಗಗಳಿಗೆ ಮುಖಾಮುಖಿಯಾಗುತ್ತಲೇ ಬಂದಂತಹವು. ಅಂತಹದರಲ್ಲೂ ಅವರ ಆ ಕಾರ್ಯಚಟುವಟಿಕೆಗಳು ಕಾರಂತರಿಗೆ ಮಾತ್ರವೇ ಸಾಧ್ಯವೆನಿಸುತ್ತವೆ. ಇಂದಿನ ಯಾಂತ್ರಿಕವಾದ ವಿದ್ಯಾಭ್ಯಾಸ ಪದ್ಧತಿಗಳು ಕೇವಲ ಪದವಿಗಳನ್ನು ಸೃಷ್ಟಿಸುತ್ತಿವೆಯೇ ಹೊರತು ವಿದ್ಯಾವಂತರನ್ನಲ್ಲ. ಇಂತಹ ಪರಿಸ್ಥಿತಿಯ ಪ್ರಸ್ತುತದಲ್ಲೂ ಕಾರಂತರ ಆ ಚಿಂತನೆಗಳು ಅವಶ್ಯಕವಾಗಿವೆ.

" ಕನ್ನಡ ನಾಡಿನ ಅನೇಕ ಕಡೆಗಳಲ್ಲಿ ಪ್ರಚಲಿತದಲ್ಲಿದ್ದ ಐಗಳ ಮಠದ ಶಿಕ್ಷಣ ಪದ್ಧತಿಗೆ ಸಾಕ್ಷಿಯಾಗಿದ್ದ ಕಾರಂತರು, ಕಾಲದ ಸ್ಥಿತ್ಯಂತರದ ಪ್ರಭಾವದಿಂದ ರೂಢಿಗೆ ಬಂದಿದ್ದ ಆಂಗ್ಲ ಶಿಕ್ಷಣ ಪದ್ಧತಿಯ ಅನುಭವವನ್ನು ಪಡೆದುಕೊಂಡು ಹಳತು -ಹೊಸತುಗಳ ನಡುವಣ ಕೊಂಡಿಯಾದರು. ತಮ್ಮ ಬದುಕಿನ ಉದ್ದಕ್ಕೂ ಮಕ್ಕಳ ಶಿಕ್ಷಣದ ಬಗ್ಗೆ ವಿಶೇಷ ಚಿಂತನೆ ನಡೆಸಿದ್ದಲ್ಲದೆ, ಆ ಬಗ್ಗೆ ರಚನಾತ್ಮಕ ಕೆಲಸಗಳನ್ನು ಮಾಡಿ ತೋರಿಸಿದರು. ಶಿಕ್ಷಣದ ಬಗ್ಗೆ ಅಧಿಕೃತವಾಗಿ ಮಾತಾಡಬಲ್ಲ ವಿಶೇಷ ಜ್ಞಾನವನ್ನು ಗಳಿಸಿದ್ದರು "[೩]

ಶ್ರೀಮತಿ ಮಾಲಿನಿ ಮಲ್ಯರವರ ಮೇಲಿನ ಮಾತುಗಳು ಕಾರಂತರಿಗೆ ಶಿಕ್ಷಣದ ಬಗೆಗಿದ್ದ ಅನುಭವಗಳು, ಚಿಂತನೆಗಳು, ತೊಡಗಿಕೊಂಡ ರಚನಾತ್ಮಕವಾದ ಕಾರ್ಯಗಳು, ಆ ಕ್ಷೇತ್ರದ ಬಗೆಗೆ ಅಥೆಂಟಿಕ್ ಆಗಿ ಮಾತನಾಡಬಲ್ಲ ಶಕ್ತಿಯನ್ನು ಪಡೆದಿದ್ದರು ಎಂಬುದನ್ನು ಸಮರ್ಥಿಸುತ್ತವೆ. ಮಕ್ಕಳ ಬಗೆಗೆ ಹೆಚ್ಚಿನ ಒಲವನ್ನು ಹಚ್ಚಿಕೊಂಡ ಕಾರಂತರು ಅವರಲ್ಲಿದ್ದಂತಹ ಅದಮ್ಯವಾದ ಜ್ಞಾನದಾಹ, ತನ್ನ ಸುತ್ತಲಿನ ಬಗೆಗೆ ಅವರಿಗಿದ್ದ ಕುತೂಹಲಗಳು, ಅವನ್ನು ತಣಿಸಲು ಬೇಕಾದಂತಹ ಸಾಮಗ್ರಿಗಳ ಅಭಾವವನ್ನು ಗುರ್ತಿಸಿದ ಕಾರಂತರು ಅವುಗಳ ಬಗೆಗೆ ಗಮನಹರಿಸಿದರು. 'ಎಳೆಯರ ಪ್ರಪಂಚವು ಬೆಳೆದವರ ಲೋಕಕ್ಕಿಂತ ಭಿನ್ನವಾದುದು ಮಾತ್ರವಲ್ಲ , ಪ್ರತಿ ಮಗುವಿನ ಮನಸ್ಸೂ ವಿಶಿಷ್ಟವಾದ ಗ್ರಹಣಶಕ್ತಿ ಮತ್ತು ಸಂವೇದನಾ ಶೀಲತೆಗಳನ್ನು ಹೊಂದಿರುತ್ತದೆ' ಎಂದು ನಂಬಿದ್ದ ಕಾರಂತರು ಆಕರ್ಷಕವಾದ, ಮಕ್ಕಳ ಮನಸ್ಸುಗಳನ್ನು ನೇರವಾಗಿ ಪ್ರವೇಶಿಸುವಷ್ಟು ಸರಳವಾದ, ಶಾಶ್ವತವಾಗಿ ಉಳಿಯುವಂಥ ಪರಿಣಾಮಕಾರಿಯಾದ ಶಿಶು ಸಾಹಿತ್ಯವನ್ನು ರಚಿಸಿದರು. ಅವರ 'ಅದ್ಭುತ ಜಗತ್ತು' 'ಬಾಲ ಪ್ರಪಂಚ' ಸಂಪುಟಗಳು ಇವನ್ನು ಸಮರ್ಥಿಸುತ್ತವೆ.

ನನ್ನ ಈ ಸಂಪ್ರಬಂಧದಲ್ಲಿ ಕಾರಂತರ ಶಿಕ್ಷಣ ಕ್ಷೇತ್ರದಲ್ಲಿನ ಪ್ರಯೋಗಗಳನ್ನು ಚರ್ಚೆಗೆ ಒಳಪಡಿಸಿಕೊಳ್ಳುವ ಮುಖ್ಯ ಉದ್ದೇಶವೆಂದರೆ, ಇವುಗಳ ಮುಖಾಂತರವಾಗಿ ಅಲ್ಲಿನ ಕ್ಷೇತ್ರದಲ್ಲಿ ಅವರಿಗೆ ಎದುರಾದ ಪ್ರತಿರೋಧಗಳನ್ನು ಗುರ್ತಿಸಬಹುದಾಗಿದೆ. 'ಬಾಲವನ' ಯಶಸ್ವಿಯಾಗಿ ಮುನ್ನಡೆಯದೆ ಹೋದುದು, ಶಿಕ್ಷಣದ ಬಗೆಗಿನ ಅವರ ಪ್ರಯೋಗಗಳಿಗೆ ಅಂದಿನ ಶಿಕ್ಷಕರು, ಶಿಕ್ಷಣಾಧಿಕಾರಿಗಳು ತೋರಿದ ನಿರ್ಲಕ್ಷ್ಯವನ್ನು ಗಮನಿಸಬಹುದು. ವಿಜ್ಞಾನ, ಗಣಿತ, ಭೂಗೋಲ ಮುಂತಾದ ಕಠಿಣ ಎನಿಸಬಹುದಾದ ವಿಷಯಗಳನ್ನು ಚಿತ್ರಗಳ ಸಮೇತ ಮಕ್ಕಳ ಆಸಕ್ತಿ, ಅಭಿರುಚಿಗಳಿಗೆ ತಕ್ಕಂತಹ ಅವರ ಚಿಂತನೆಗಳಿಗೂ ಎದುರಾದ ವೈರುಧ್ಯದ ನೆಲೆಗಳನ್ನು ಕಾಣಬಹುದಾಗಿದೆ. ಈ ರೀತಿಯಾದ ಸಾಂಸ್ಕೃತಿಕ ಸಂಘರ್ಷಗಳನ್ನು ಅವರ ಆತ್ಮಕಥಾನಕಗಳಲ್ಲಿ ಅವರು ಕಟ್ಟಿಕೊಟ್ಟಿರುವುದನ್ನು ಗುರ್ತಿಸಬಹುದಾಗಿದೆ.

## ಅಡಿ ಟಿಪ್ಪಣಿಗಳು :

೧. ರವೀಂದ್ರನಾಥ ಠಾಗೂರ್, ನಿಬಂಧಮಾಲಾ ಭಾಗ -೧, (ಕನ್ನಡಕ್ಕೆ ಅನುವಾದ) ಸ್ವಾಮಿ ಶಂಕರಾನಂದ ಸರಸ್ವತಿ, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೬, ಪುಟ -೨೮೦.

೨. ಶಿವರಾಮ ಕಾರಂತ, 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಎಸ್.ಬಿ.ಎಸ್. ಪಬ್ಲಿಷರ್ಸ್ ಬೆಂಗಳುರು, ೨೦೦೭ (ಹತ್ತನೇ ಮುದ್ರಣ) ಪುಟ -೧೫೪.

೩. ಮಾಲಿನಿ ಮಲ್ಯ, 'ಶಿವರಾಮ ಕಾರಂತ ' (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಮಾಲಿಕೆ ) ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭, ಪುಟ -೫೭.

ಅಧ್ಯಾಯ - ೬

# ಇತರೆ ಕ್ಷೇತ್ರಗಳ ಮೂಲಕ ಕಾರಂತರ ಸಂಘರ್ಷಾತ್ಮಕ ನೆಲೆಗಳು.


೬.೧. ರಂಗಭೂಮಿಯಲ್ಲಿ ಕಾರಂತರು.

೬.೨. ಪತ್ರಿಕೋದ್ಯಮ ಮತ್ತು ಕಾರಂತರು.

೬.೩. ಧಾರ್ಮಿಕ ವಿಚಾರಗಳು ಮತ್ತು ಕಾರಂತರು.

೬.೪. ಕಾರಂತರು ಮತ್ತು ಸಿನಿಮಾ.

೬.೫. ಪರಿಸರ ಮತ್ತು ಕಾರಂತರು.


" ಕಾರಂತರು ನಿಜವಾಗಿ ಕಾರಂತರಲ್ಲ. ಕುಶಲಿಯಾದ ಒಬ್ಬ ನಟ. ನಟನಂತೆ ಜೀವನ ನಾಟಕವನ್ನು ಅಭಿನಯಿಸುತ್ತಾರೆ. ಅಲ್ಲದಿದ್ದರೆ ಒಂದೇ ಜೀವನದಲ್ಲಿ ಒಂದೇ ಬಾಳಲ್ಲಿ ಇಷ್ಟೆಲ್ಲಾ ಮಾಡಲು ಸಾಧ್ಯವೇ ? ಒಂದೇ ಜೀವಿಯಿಂದ ಇಷ್ಟೆಲ್ಲಾ ಆಗುವುದುಂಟೆ ? ಇದು ಒಂದು ದೊಡ್ಡ ಸಮಸ್ಯೆ, ಬಿಡಿಸಲಾರದ ಒಗಟು. ನಡೆಯುವುದು ಎಲ್ಲವೂ ನಾಟಕದಂತೆ. ಕಾರಂತರು ಹಿನ್ನೆಲೆಯಲ್ಲಿ, ತೆರೆಯ ಮರೆಯಲ್ಲಿ ನಿಶ್ಚಲರು "

-ಶ್ರೀಮತಿ ಲೀಲಾ ಕಾರಂತ

## ೬.೧. ರಂಗಭೂಮಿಯಲ್ಲಿ ಕಾರಂತರು

" ಸಮಾಜ ಸುಧಾರಣೆಗೆ ನಾಟಕವೂ ಒಂದು ಸಾಧನವಾಗಲಾರದೆ - ಎಂಬ ಆಸೆ ನನ್ನಲ್ಲಿ ಮೂಡಿತು. ಅದಕ್ಕಾಗಿ ನನ್ನ ನಾಟಕಗಳನ್ನು ರಂಗ ಭೂಮಿಗೆ ತರಲು ಪ್ರಯತ್ನಿಸಿದೆ "

-ಶಿವರಾಮ ಕಾರಂತ

## ೬.೧. ರಂಗಭೂಮಿಯಲ್ಲಿ ಕಾರಂತರು

ಸಮಾಜ ಸುಧಾರಣೆಗೆ ನಾಟಕವೂ ಒಂದು ಸಾಧನ ಎಂದು ತಿಳಿದವರು ಕಾರಂತರು. ಅದಕ್ಕಾಗಿಯೆ ಗದ್ಯ ನಾಟಕಗಳು, ಗೀತನಾಟಕಗಳು, ಮೂಕ ನಾಟಕಗಳು, ಛಾಯಾ ನಾಟಕಗಳು, ಅಣಕವಾಡ, ವಿಕಟ ಪ್ರಹಸನ, ಐತಿಹಾಸಿಕ ನಾಟಕಗಳು, ಸಾಮಾಜಿಕ ನಾಟಕಗಳು, ಮಕ್ಕಳ ನಾಟಕಗಳು, ಹಾಸ್ಯ ನಾಟಕಗಳು, ನೃತ್ಯರೂಪಕಗಳು, ದೃಶ್ಯ ರೂಪೀ ನಾಟಕಗಳು ಮುಂತಾಗಿ ನಾಟಕಗಳ ಎಲ್ಲಾ ಮಾಧ್ಯಮಗಳ ಮೂಲಕವೂ ರಂಗಪ್ರಯೋಗಗಳನ್ನು ನಡೆಸಿ ಆ ಮೂಲಕ ರಂಗಭೂಮಿಯಲ್ಲಿ ಹೊಸತನಕ್ಕೆ ನಾಂದಿ ಹಾಡಿದರು. ಮೂಢನಂಬಿಕೆಗಳ ವಿರುದ್ಧ ಜನಜಾಗೃತಿ, ಅಸ್ಪೃಶ್ಯತಾ ನಿವಾರಣೆ, ಕುಡುಕುತನದ ದುಷ್ಪರಿಣಾಮಗಳು, ಪರಿಸರದ ಕಾಳಜಿಗಳು, ಶುದ್ಧವಾದ ಜಲ, ನೆಲ, ನೈರ್ಮಲ್ಯದ ಮಹತ್ವ ಕೃಷಿಯಲ್ಲಿನ ಸುಧಾರಿತ ಪದ್ಧತಿಗಳು, ರಾಜಕೀಯ ಸಂದರ್ಭಗಳ, ರಾಜಕಾರಣಿಗಳ ಹೊಟ್ಟೆ ಬಾಕ ಸಂಸ್ಕೃತಿ, ಡಾಂಬಿಕ ರಾಷ್ಟ್ರಭಕ್ತಿ ಮುಂತಾದ ವಿಭಿನ್ನ ಕಥಾ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ನಾಟಕಗಳನ್ನು ಬರೆದು ಪ್ರದರ್ಶಿಸಿದರು. ರಂಗಭೂಮಿಯ ಶ್ರೇಷ್ಠತೆಯನ್ನು ಕುರಿತು ಡಾ. ಹೆಚ್.ಕೆ.ರಂಗನಾಥ್‌ರವರು ತಮ್ಮ 'ಕರ್ನಾಟಕ ರಂಗಭೂಮಿ' ಎಂಬ ಮಹಾ ಪ್ರಬಂಧದಲ್ಲಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ.



> " ರಂಗಭೂಮಿ ಹಲವಾರು ಲಲಿತ ಕಲೆಗಳ ಸಂಗಮ ಕ್ಷೇತ್ರ. ಅದರ ಜೀವಾಳ ನಾಟಕ. ಕಾಮನಬಿಲ್ಲಿನಂತೆ, ರಸವೊಸರಿಸುವ ಲಲಿತಕಲೆಗಳ ಮೇಳವಾಗಿರುವ ನಾಟಕವೆಂದರೆ ಪ್ರಾಜ್ಞರ- ಅಭಿಪ್ರಾಯದಂತೆ, ಮನಸ್ಸನ್ನು ರಂಜಿಸಿ, ಆತ್ಮವನ್ನು ಮೇಲೆತ್ತುವ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ, ಶಿಲ್ಪ , ಅಬಿನಯಗಳು ಮೇಳವಿಸಿ ರಸ ನಿರೂಪಣೆ ಮಾಡುವ ಉದ್ದೇಶದಿಂದ ಮೈತಳೆದ ನಾಟಕ, ಬಹು ಜನಪ್ರಿಯವಾದ ಒಂದು ದೃಶ್ಯಕಾವ್ಯವಾಗಿದೆ. ಅದರ ವೈಶಿಷ್ಟ್ಯ, ಪ್ರಭಾವಗಳನ್ನು ಗುರುತಿಸುವ ಪ್ರಾಚೀನರು 'ಕಾವ್ಯೇಷು ನಾಟಕಂ ರಮ್ಯಂ' ಎಂದರು. ಮಹಾಕವಿ ಕಾಳಿದಾಸ, ತನ್ನ ಮಾಲವಿಕಾಗ್ನಿ ಮಿತ್ರ ನಾಟಕದಲ್ಲಿ ನಾಟಕಕ್ಕೆ ಪುಣ್ಯಯಜ್ಞದ ಮಹತಿಯನ್ನು ಕೊಟ್ಟನು. ಭಿನ್ನ ರುಚಿಗಳ ಜನಕ್ಕೆ ಅದು ಏಕೈಕ ಸಮಾರಾಧನೆ! ವ್ಯಕ್ತಿಗಳ ಬೇರೆ -ಬೇರೆ ಅಭಿರುಚಿಗಳಿಗೆ ತಕ್ಕಂತೆ ಮನೋರಂಜನೆಯನ್ನಿತ್ತು, ಆ ಮೂಲಕ ಜನತೆಗೆ ಸುಜ್ಞಾನವನ್ನು ಊಡಿಸುವ ಮಹಾಸಾಧನವೆಂದು ಸಾರಿದರು"[೧]

ವಿಭಿನ್ನವಾದ ಎಲ್ಲಾ ವರ್ಗದ ಜನರಿಗೂ ಮನರಂಜನೆಯ ಜೊತೆಜೊತೆಗೆ ಮಾಹಿತಿಯನ್ನು, ಜಾಗೃತಿಯನ್ನು ನೀಡುವಂತಹ ದೃಶ್ಯ ಕಾವ್ಯವೇ ನಾಟಕ ಎಂಬುದಾಗಿ ರಂಗಭೂಮಿ ಮತ್ತು ನಾಟಕವನ್ನು ಕುರಿತು ಹೆಚ್.ಕೆ. ರಂಗನಾಥ್‌ರವರು ಹೇಳಿರುವ ಮಾತುಗಳನ್ನು ಮೇಲಿನ ಉದ್ಧರಣೆಯಲ್ಲಿ ಗಮನಿಸಬಹುದಾಗಿದೆ. ಇಂತಹ ಕ್ಷೇತ್ರವನ್ನು ಕಾರಂತರು ಯಾವ ರೀತಿ ಬಳಸಿಕೊಂಡರು, ಪ್ರಯೋಗಗಳನ್ನು ನಡೆಸಿದರು, ಅದರ ಮೂಲಕ ಯಾವ ರೀತಿ ಸಾಂಸ್ಕೃತಿಕತೆಗೆ ಮುಖಾಮುಖಿಯಾದರು ಎಂಬುದನ್ನು ಮುಂದಿನ ವಿಚಾರಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ. ಹಲವು ವಿದ್ಯಾರ್ಥಿಗಳ ಮತ್ತು ಗೆಳೆಯರ ಸಹಾಯದಿಂದ ನಾಟಕದ ಪರದೆಗಳು, ದೀಪಗಳು ಮುಂತಾದ ಪರಿಕರಗಳನ್ನು ಹೊತ್ತುಕೊಂಡು ಕಾಲ್ನಡಿಗೆಯಲ್ಲಿಯೇ ಗ್ರಾಮೀಣ ಪ್ರದೇಶಗಳಲ್ಲಿ ಶಿಬಿರಗಳನ್ನು ನಡೆಸುತ್ತಿದ್ದರು. ಶಾಲಾ ಮಕ್ಕಳ ಶೈಕ್ಷಣಿಕ ಶಿಬಿರಗಳನ್ನೇರ್ಪಡಿಸಿ ಅವರಲ್ಲಿ ಸುಪ್ತವಾಗಿದ್ದ ಪ್ರತಿಭೆಗಳನ್ನು ಹೊರತರಲು ರಂಗಭೂಮಿಯನ್ನು ವಿಶೇಷವಾಗಿ ಬಳಸಿಕೊಂಡರು. ಹಳ್ಳಿಗಳ ಆರ್ಥಿಕ ಸ್ಥಿತಿಯ ಪರಿಶೀಲನೆಗಾಗಿ ಮೂವತ್ತು ಮೂರು ಗ್ರಾಮಗಳನ್ನು ನಾಲ್ಕು ತಿಂಗಳುಗಳ ಕಾಲ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಸಾಮಾಜಿಕ ಸುಧಾರಣೆಗೆ ಪೂರಕವಾದಂತಹ ಜನಜಾಗೃತಿ ಮೂಡಿಸುವ ನಾಟಕಗಳನ್ನು ಬರೆದು ಸ್ವತಃ ರಂಗಸಜ್ಜಿಕೆಗಳನ್ನು ತಯಾರಿಸಿ, ಸ್ಫೂರ್ತಿ ಬಂದಾಗ ತಾವೇ ನಾಟಕಗಳಲ್ಲಿ ಪಾತ್ರ ವಹಿಸಿ, ಕುಣಿದು ರಂಗಭೂಮಿಯಲ್ಲಿ ತೊಡಗಿಸಿಕೊಂಡು ತಲ್ಲೀನರಾಗುತ್ತಿದ್ದವರು ಕಾರಂತರು.

ಕಾರಂತರು ಅನೇಕ ನಾಟಕ ಕಂಪನಿಗಳ ಸಂಪರ್ಕವನ್ನು ಏರ್ಪಡಿಸಿಕೊಂಡು ಅವುಗಳ ಒಳಗು-ಹೊರಗೂ ಬದಲಾವಣೆಗಳನ್ನು ತರಲು ಪ್ರಯತ್ನಿಸಿದರು. ಅಂತಹವುಗಳಲ್ಲಿ ಮಂಗಳೂರಿನ ನಾಟಕ ಕಂಪೆನಿಯೂ ಒಂದು. ನಂತರದಲ್ಲಿ ಅದನ್ನು ತೊರೆದು ಶ್ರೀ ಹಾಲಸಿದ್ದೇಶ್ವರದ ನಾಟಕ ಮಂಡಲದ ಮೂಲಕ ಹಲಗೇರಿಯ ಬೆಟ್ಟಪ್ಪನವರ ಪರಿಚಯವಾದ ಸಂದರ್ಭದಲ್ಲಿ ಮಹಾಭಾರತ ಗ್ರಂಥದ ಇಂಗ್ಲಿಷ್ ಅನುವಾದವನ್ನೋದಿ, ಗದಾಯುದ್ಧದ ಕಥೆಯನ್ನು ಒಂದು ಗದ್ಯ ನಾಟಕವನ್ನಾಗಿ ಬರೆದರು ಮತ್ತು ಅಲ್ಲಿನ ಪ್ರಾಣಿದಯಾ ಸಂಘದ ಮಿತ್ರರ ಪ್ರೇರಣೆಯಿಂದ 'ಗೋಮಾತೆ ' ಎಂಬ ಮತ್ತೊಂದು ನಾಟಕವನ್ನು ಬರೆದು ಇದೇ ಕಂಪನಿಯ ಮೂಲಕ ಪ್ರದರ್ಶಿಸಲಾಯಿತು. ೧೯೩೦ರ ಸುಮಾರಿಗೆ ಮಂಗಳೂರಿಗೆ 'ಗುರು ಸಮರ್ಥ ನಾಟಕ ಮಂಡಲ'ದ ಕಂಪನಿ ಬಂದಾಗ ವಿಜಯನಗರದ ಸಾಳ್ವ ತಿಮ್ಮನ ಕಥೆಯನ್ನು ಆಧರಿಸಿ 'ಕಠಾರಿ ಭೈರವ ' ಎಂಬ ಹೆಸರನ್ನು ಕೊಟ್ಟು ಐದಂಕದ ನಾಟಕವನ್ನು ಅಭ್ಯಾಸ ಮಾಡಿಸಿ ಪ್ರದರ್ಶಿಸಿದರು. ಗುಬ್ಬಿ ವೀರಣ್ಣನವರ ನಾಟಕ ಕಂಪನಿಯ ಪರಿಚಯವಾದ ಮೇಲೆ 'ಸತಿ ಸಂಯುಕ್ತಾ' ನಾಟಕವನ್ನು ಮಂಗಳೂರು ಟ್ರೈನಿಂಗ್ ಕಾಲೇಜಿನ ವಿದ್ಯಾರ್ಥಿಗಳು ಅವರ ಥಿಯೇಟರಿನಲ್ಲಿ ಪ್ರದರ್ಶಿಸಿದರು. ಈ ರೀತಿ ಸದಾ ಒಂದಲ್ಲ ಒಂದು ಚಟುವಟಿಕೆಗಳಲ್ಲಿ ತೊಡಗಿ ಕ್ರಿಯಾಶೀಲರಾಗಿದ್ದವರು ಕಾರಂತರು.

ಪುತ್ತೂರು ತಾಲ್ಲೂಕು ಬೋರ್ಡಿನ ಅಧ್ಯಕ್ಷರಾಗಿದ್ದ ಮೊಳಹಳ್ಳಿ ಶಿವರಾಯರ ಪರಿಚಯವಾದ ಮೇಲೆ ಅವರು ಶಾಲೆಯ ಮಕ್ಕಳಿಂದ ಕೆಲವು ಸಮಸ್ಯಾ ನಾಟಕಗಳನ್ನಾಡಿಸುವ ಇಚ್ಛೆಯನ್ನು ಪ್ರಕಟಿಸಿದಾಗ ಅವರಿಗಾಗಿ 'ಡೋಮಿಂಗೋ ' ಎಂಬ ಏಕಾಂಕ ನಾಟಕವನ್ನು , 'ಸಾವಿರ ಮಿಲಿಯ' ಎಂಬ ನಾಟಕವನ್ನು ಬರೆದು ರಜೆಯ ದಿನಗಳಲ್ಲಿ ಐವತ್ತು - ಅರವತ್ತು ಹಳ್ಳಿಗಳಲ್ಲಿ ಪ್ರದರ್ಶಿಸಿದರು. ಅಂದಾನುಕರಣೆಯಿಂದ, ಅವಿವೇಕತನದಿಂದ ಅಸ್ಪೃಶ್ಯತೆಯನ್ನು ಅಪ್ಪಿಕೊಂಡು ಶೋಷಣೆಯನ್ನು ಮಾಡುವ ಮೇಲ್ವರ್ಗಗಳು ಒಂದು ಕಡೆಯ ಪರಿಸ್ಥಿತಿಯಾದರೆ, ಅವರೇ ಮತ್ತೊಂದು ಕಡೆಯಲ್ಲಿ ಶ್ರೀಮಂತಿಕೆ, ಅಧಿಕಾರವಿದ್ದ ಅಸ್ಪೃಶ್ಯರನ್ನು ಆದರದಿಂದ ಸ್ವಾಗತಿಸುವ ವಿಚಿತ್ರ ಸನ್ನಿವೇಶಗಳನ್ನು ಬಹಳ ಪರಿಣಾಮಕಾರಿಯಾದ ವಿಡಂಬನೆಗಳ ಮೂಲಕ 'ಡೋಮಿಂಗೋ ' ನಾಟಕದಲ್ಲಿ ಚಿತ್ರಿಸಿದ್ದಾರೆ. ಮುಂದೆ ಕಾರಂತರೆ ಇದನ್ನು ಚಲನಚಿತ್ರವಾಗಿಯೂ ತಯಾರಿಸಿದರು. ಆದರೆ ಇದು ಗ್ರಂಥರೂಪದಲ್ಲಿ ಲಭ್ಯವಿಲ್ಲದಿರುವುದಕ್ಕೆ ಅಂದಿನ ಮೇಲ್ವರ್ಗದವರ ಬಲವಾದ ಪ್ರತಿಭಟನೆಯೇನಾದರೂ ಬಂದಿರಬಹುದೇ ಎಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಕಾರಂತರು ತಮ್ಮ ನಾಟಕಗಳಲ್ಲಿ ಒಬ್ಬ ಸಾಮಾನ್ಯ ವ್ಯಕ್ತಿಯಿಂದ - ಪರಲೋಕದ ದೇವರುಗಳವರೆಗೂ ಪಾತ್ರಗಳನ್ನು ಸೃಷ್ಟಿಸುತ್ತಿದ್ದರು. ಅದರಲ್ಲೂ ದೇವರುಗಳ ಕಲ್ಪನೆಗಳಲ್ಲಿ ಸಂಪ್ರದಾಯಗಳ ನಿಲುವಿಗೆ ವ್ಯತಿರಿಕ್ತವಾದ ರೀತಿಯಲ್ಲಿ ಅವರನ್ನು ಚಿತ್ರಸಿ ವಿಡಂಬನಾತ್ಮಕವಾಗಿ ರಂಜನೆಯ ಜೊತೆಗೆ ಸಾಮಾಜಿಕ ಸುಧಾರಣೆಯನ್ನು ಮಾಡಲು ಪ್ರಯತ್ನಿಸಿದವರು.

'ನಾಟಕ ಪ್ರಯೋಗಗಳ ಹಾದಿಯಲ್ಲಿ ನನ್ನ ಮಾತುಗಳ ಮೋಹಕ್ಕೆ ನಾನೇ ಬಲಿಯಾಗದಿದ್ದರೂ ಅಭಿನಯದ ಹುಚ್ಚಿಗೆ ಬಲಿಯಾಗಿದ್ದೆ. ಕಠಿಣ ಸನ್ನಿವೇಶಗಳ ಚಿತ್ರಣ ನನಗೆ ಪ್ರಿಯವಾಗಿತ್ತು. ಅದಕ್ಕೆ ತಕ್ಕ ಅವಕಾಶಗಳು ದೊರೆಯುವಂತೆ ನನ್ನ ನಾಟಕಗಳಲ್ಲಿ ಸ್ಥಳ ಮಾಡಿಕೊಡುತ್ತಿದ್ದೆ ' ಎಂದು ತಮ್ಮ ಅಭಿನಯದ ಬಗ್ಗೆ ಸ್ವತಃ ಕಾರಂತರೆ ಹೇಳಿಕೊಂಡಿದ್ದಾರೆ.

ನಾಟಕಗಳ ಪ್ರಯೋಗಗಳ ಕಾಲದಲ್ಲಿ ಕಾರಂತರ ಮನಸ್ಸು ಅನ್ಯದೇಶೀಯ ನಾಟಕಗಳ ಕಡೆಗೂ ವಿಶೇಷವಾಗಿ ಹರಿಯಿತು. ಶೇಕ್ಸ್‌ಪಿಯರ್, ಶೆರಿಡನ್, ಶಾ, ಸಮರ್‌ಸೆಟ್‌ಮೋಮ್, ಗಾಲ್ಸ್‌ವರ್ದಿ, ಮೇಟರ್‌ಲಿಂಕ್, ಪಿರೆಂಡಲೊ, ಯೂಜಿನ್ ಓ ನೆಯಿಲ್ ಮೊದಲಾದವರ ಕೃತಿಗಳನ್ನು ಓದಿಕೊಂಡು ಪೂರಕ ಶಿಕ್ಷಣವನ್ನು ಪಡೆದುಕೊಂಡರು. ಶೇಕ್ಸ್‌ಪಿಯರನ 'ಹೆಮ್ಲೆಟ್ ' ನಾಟಕವನ್ನು - 'ಹೇಮಂತ' ಎಂಬ ಹೆಸರಿನಲ್ಲಿ ೧೯೮೭ ರಲ್ಲಿ ಪ್ರಕಟಿಸಿದರು. ಎರಡನೇ ಮಹಾಯುದ್ಧದ ಕಥೆಯನ್ನು ಆಧರಿಸಿ - 'ಗೆದ್ದವರ ಸತ್ಯ' ಎಂಬ ನಾಟಕವನ್ನು ರಚಿಸಿದರು. ಆಧುನಿಕ ಪ್ರಜಾಪ್ರಭುತ್ವದ ವಿಪರ್ಯಾಸ ಹೇಗೆ ನಡೆಯುತ್ತಿದೆ, ರಾಜಕೀಯ ಪ್ರಪಂಚದ ಕರಾಳ ಮುಖಗಳನ್ನು

ಇಲಿ, ಹೆಗ್ಗಣ, ನರಿ, ನಾಯಿಗಳನ್ನು ಮುಖ್ಯ ಪಾತ್ರಗಳನ್ನಾಗಿರಿಸಿಕೊಂಡು - 'ನಿಮ್ಮ ಓಟು ಯಾರಿಗೆ?' ಎಂಬ ನಾಟಕದ ಮೂಲಕ ಮುಲಾಜಿಲ್ಲದೆ ಸಮಾಜದ ಉನ್ನತಿಗೆ ತೊಡಕಾಗಿರುವ ನೇತ್ಯಾತ್ಮಕ ವ್ಯಕ್ತಿಗಳನ್ನು ಧೈರ್ಯದಿಂದ ವಿಡಂಬಿಸಿ ಪ್ರತಿಭಟಿಸುತ್ತಲೇ ಬಂದರು.

ಕನ್ನಡ ರಂಗಭೂಮಿಯಲ್ಲಿ ವಿಶಿಷ್ಟವಾದ ಪ್ರಯೋಗಗಳನ್ನು ನಡೆಸಿದವರು ಕಾರಂತರು. ಜನಪದ ರಂಗಭೂಮಿಯ ಆಳವಾದ ಪರಿಚಯವಿದ್ದ ಅವರು ಆಧುನಿಕ ಕನ್ನಡ ನಾಟಕದ ಕೆಲವು ಪ್ರಕಾರಗಳಿಗೆ ಮೊದಲಿಗರಾದರು. ಗೀತನಾಟಕ, ಛಾಯಾನಾಟಕ, ಅಣುಕುವಾಡ ಮುಂತಾದ ಅವರು ಕಲ್ಪಿಸಿದ ನಾಟಕ ಪ್ರಕಾರಗಳಿಗೆ ಜನಪದ ರಂಗಭೂಮಿಯು ಪ್ರೇರಣೆಯಾಗಿರುವುದನ್ನು ಗಮನಿಸಬಹುದು. ಕಿಸಾ ಗೌತಮಿ, ಮುಕ್ತದ್ವಾರ, ರಕ್ತಕಾಣಿಕೆ ಮುಂತಾದ ಗೀತ ನಾಟಕಗಳಲ್ಲಿಯೂ ಸಹ ಅವರ ಸಮಾಜ ಮುಖಿಯಾದ ಧೋರಣೆಗಳನ್ನು ಗುರ್ತಿಸಬಹುದಾಗಿದೆ.

ಯಕ್ಷಗಾನ ಕಾರಂತರನ್ನು ವಿಶೇಷವಾಗಿ ಆಕರ್ಷಿಸಿದ ಕಲಾ ಪ್ರಕಾರ. ಪ್ರಾರಂಭದಿಂದಲೂ ಯಕ್ಷಗಾನದಲ್ಲಿನ ಉಡುಗೆ -ತೊಡುಗೆ, ರಕ್ಕಸ ಪಾತ್ರಗಳ ಬಗ್ಗೆ , ಭಾಗವತರ ಬಗ್ಗೆ , ಪಾತ್ರಗಳ ಹಾವ-ಭಾವಗಳನ್ನು ಕುರಿತು ಲೇಖನಗಳನ್ನು ಬರೆಯುತ್ತಲೆ ಬಂದಿದ್ದರು. ಯಕ್ಷಗಾನ ಬ್ಯಾಲೆಗಳನ್ನು ಸೃಷ್ಟಿಸಿ, ಅಲ್ಲಿನ ನೃತ್ಯ, ವೇಷ ಭೂಷಣಗಳ ಬಗೆಗೆ, ಅಲ್ಲಿ ಬರುವ ಸಂಗೀತದ ಬಗೆಗೆ ವಿಶೇಷ ಗಮನ ಹರಿಸಿ ಸಾಂಪ್ರದಾಯಿಕ ಚೌಕಟ್ಟಿಗೆ ಮತ್ತಷ್ಟು ಪುಷ್ಠಿಯನ್ನು ನೀಡುತ್ತ ಪ್ರಯೋಗಗಳನ್ನು ನಡೆಸಿದರು. ಯಕ್ಷಗಾನ ಕಲೆಯ ಹಿನ್ನೆಲೆ, ನಾಟಕಗಳ ವಸ್ತುಗಳು, ಚಿತ್ರಣ ಮಾಧ್ಯಮಗಳು, ಸಂಸ್ಥೆಗಳು, ಬಯಲಾಟಗಳು ಮತ್ತು ಅವುಗಳ ಬೆಳವಣಿಗೆ, ರಂಗಸ್ಥಳದ ಸಂಪ್ರದಾಯಗಳು, ಸಭಾಲಕ್ಷಣ ಪರಿಚಯ, ಯಕ್ಷಗಾನ ನೃತ್ಯ, ಬರೆದ ಪದ್ಯ, ಆಡುವ ಗದ್ಯ, ವೇಷಭೂಷಣಗಳು, ಆಟದ ರೂಪಾಂತರಗಳು ಮುಂತಾದ ಅಧ್ಯಾಯಗಳಲ್ಲಿ ಕಾರಂತರು ಯಕ್ಷಗಾನ ಕಲೆಯ ಬಗ್ಗೆ ವ್ಯಾಪಕವಾಗಿ ಯೋಚಿಸಿ ಬರೆದಿರುವ ಕೃತಿ 'ಯಕ್ಷಗಾನ-ಬಯಲಾಟ' ಯಕ್ಷಗಾನ ಕಲಾವಿದರು ಈಗಲೂ ಕಾರಂತರನ್ನು ಗುರುಗಳೆಂದೇ ಗೌರವಿಸುವಷ್ಟು ಅವಿನಾಭಾವ ಸಂಬಂಧವನ್ನು ಅವರು ಹೊಂದಿದ್ದರು.

> " ಅವರು ಬಹುಶ್ರುತರು, ಅವರಿಗೆ ತಿಳಿಯದ ವಿಷಯವೇ ಇಲ್ಲ. ಚಿಕ್ಕ ಮಕ್ಕಳ ಸಲುವಾಗಿ ಅವರಿಗೆ ಮೊದಲಿನಿಂದಲೂ ಪ್ರೀತಿ. ಅವರು ಮಕ್ಕಳ ಮಾನಸಿಕ ಜೀವನವನ್ನು ಬಹಳ ಆಳವಾಗಿ ಅಭ್ಯಾಸ ಮಾಡಿದವರು. ಆದೇ ರೀತಿ ಅವರು ಕಾಂಗ್ರೆಸ್ಸಿನ ಭಕ್ತರು ; ಕರ್ನಾಟಕದ ಭಕ್ತರೂ ಅಹುದು. ಹೀಗೆ ಎರಡೂ ಗುಣಗಳು ಕೂಡಿದ ಮಹಾವ್ಯಕ್ತಿ ಆಗಿನ ದಿವಸದಲ್ಲಿ ಅಪರೂಪವಾಗಿದ್ದರು : ಇವರು ಕಥೆ ಹೇಳುವುದರಲ್ಲಿ ಮತ್ತು ಸ್ವತಃ

ನಾಟಕ ಮಾಡುವುದರಲ್ಲಿ ಗಟ್ಟಿಗರು. ಯಕ್ಷಗಾನದಲ್ಲಿಯಂತೂ ಅವರು ಅಪೂರ್ವ ಕ್ರಾಂತಿಯನ್ನೇ ಮಾಡಿರುವರು. ಅವರ ಕ್ರಾಂತಿಯ ಮೂಲಕವೇ ಯಕ್ಷಗಾನದ ಕೀರ್ತಿ ಸ್ವೀಡನ್ನದವರೆಗೆ ಹೋಯಿತು. ಅವರು ಈಗ ಕೈಗೊಂಡಿರುವ ಕಾರ್ಯವಂತೂ ಅವರನ್ನು ಹಿಂದೂಸ್ಥಾನದಲ್ಲೇ ಪ್ರಸಿದ್ಧರನ್ನಾಗಿ ಮಾಡುವ ಸಂಭವವಿದೆ. ಅದೆಂದರೆ ಯಕ್ಷಗಾನದಲ್ಲಿ ಕೇವಲ ನೃತ್ಯ ಹಾವ -ಭಾವದಿಂದ ಭಾವನೆಗಳನ್ನು ವ್ಯಕ್ತಮಾಡುವ ಪ್ರಯತ್ನ ''೨

ಕಾರಂತರ ಅಪಾರವಾದ ಜ್ಞಾನ, ಅವರು ಮಕ್ಕಳ ಮಾನಸಿಕ ಸಾಮರ್ಥ್ಯವನ್ನು ಹೆಚ್ಚಿಸಲು ನಡೆಸಿದ ಪ್ರಯೋಗಗಳು, ರಾಷ್ಟ್ರಪ್ರೇಮ ಮುಂತಾದವುಗಳನ್ನು ತಿಳಿಸುತ್ತ, ಯಕ್ಷಗಾನದಲ್ಲಿ ವಿಶೇಷವಾದ ಕ್ರಾಂತಿಯನ್ನೇ ಮಾಡಿದರು. ಯಕ್ಷಗಾನದಲ್ಲಿ ಕೇವಲ ನೃತ್ಯ ಹಾವ -ಭಾವಗಳಿಂದ ಭಾವನೆಗಳನ್ನು ವ್ಯಕ್ತಮಾಡುವ ಹೀಗೆ ಇನ್ನು ಮುಂತಾದ ಹೊಸತನಗಳನ್ನು ಪ್ರಯೋಗಿಸದವರು ಕಾರಂತರ ಎಂದು ಆಲೂರು ವೆಂಕಟರಾವ್ ಹೇಳುವ ಮೇಲಿನ ಮಾತುಗಳು ಅವರು ಯಕ್ಷಗಾನದಲ್ಲಿ ಮಾಡಿದ ಪ್ರಯೋಗಶೀಲತೆಗಳನ್ನು ಕುರಿತು ತಿಳಿಸಿಕೊಡುತ್ತವೆ.

ತಿಲಕರು ಎಲ್ಲಾ ಜನರನ್ನು ಒಂದೆಡೆ ಸೇರಿಸಿ ಸಾಮರಸ್ಯ, ಜಾಗೃತಿಯನ್ನು ಮೂಡಿಸಲು 'ಗಣೇಶ ಚತುರ್ಥಿ' ಮುಂತಾದ ಹಬ್ಬಗಳನ್ನು ವಿಶೇಷವಾಗಿ ಸಾಮೂಹಿಕವಾಗಿ ಆಚರಿಸುವ ಪದ್ಧತಿಗಳನ್ನು ರೂಢಿಗೆ ತಂದರು. ಇದರ ಪ್ರಭಾವದಿಂದ ಕಾರಂತರು ತಮ್ಮ ಮುಂದಾಳತನದಲ್ಲಿ ಪುತ್ತೂರಿನಲ್ಲಿ ದಸರಾ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದರು. ಈ ಕಾರ್ಯಕ್ರಮಗಳಲ್ಲಿ ಯಕ್ಷಗಾನವು ಮುಖ್ಯವಾದ ಕಾರ್ಯಕ್ರಮವಾಗಿತ್ತು. ಈಗಲೂ ವಿದೇಶಗಳಲ್ಲಿ ನಮ್ಮ ಸಂಸ್ಕೃತಿಯ ಪ್ರತಿನಿಧಿಯಾಗಿ ಪ್ರದರ್ಶನವಾಗುತ್ತಿರುವ ಪ್ರಾದೇಶಿಕವಾದ ಕಲೆ, ಇಲ್ಲಿನ ಭಾಷೆ, ದೇಶಗಳ ಎಲ್ಲೆಯನ್ನು ದಾಟಿರುವಂತಹ ಯಕ್ಷಗಾನದ ಜನಪ್ರಿಯತೆಯನ್ನು ಕಾರಂತರ ಪ್ರಯತ್ನಗಳ ಸಾರ್ಥಕತೆ ಇರುವುದನ್ನು ಗಮನಿಸಬಹುದಾಗಿದೆ. ಉಡುಪಿಯಲ್ಲಿ 'ಯಕ್ಷಗಾನ ಕೇಂದ್ರ'ದ ಉಗಮ ವಿಕಾಸಗಳಿಗಾಗಿ ಶ್ರಮಿಸಿದರು. 'ಯಕ್ಷರಂಗ 'ವನ್ನು ಸ್ಥಾಪಿಸಿದರು. ಯಕ್ಷಗಾನ ನೃತ್ಯ ನಾಟಕ ತಂಡವನ್ನು ಕಟ್ಟಿಕೊಂಡು ದೇಶ -ವಿದೇಶಗಳಲ್ಲಿ ಸಂಚರಿಸಿ ಕಲೆಯ ಪ್ರಸಾರ ಕಾರ್ಯದಲ್ಲಿ ತೊಡಗಿದರು. ನಮಗೆ ಈ ಯಕ್ಷಗಾನ ಬಯಲಾಟದ ಕಲ್ಪನೆ ಎಂಬುದು ಕೇವಲ ಜನರಂಜನೆಗಷ್ಟೇ ಹುಟ್ಟಿರದ, ಬದಲು ಜನರು ನಂಬಿ ಬಂದಿರುವ ದೇವರುಗಳ ಆರಾಧನೆಯ ಬಗೆಯನ್ನೂ ರೂಪಗೊಂಡು ಬಂದ ಒಂದು ಕಲಾ ಸಂಪ್ರದಾಯ ಎಂಬುದಾಗಿ ಅನಿಸುತ್ತದೆ ' ಎಂದು ಹೇಳುವ ಮೂಲಕ ಯಕ್ಷಗಾನ ಕಲೆಯನ್ನು ಉಳಿಸಿ ಬೆಳೆಸಲು ಸಹಕಾರಿಯಾದರು.

ಯಕ್ಷಗಾನಕ್ಕೆ ಕಾರಂತರಿಂದ ಪ್ರಯೋಜನಕ್ಕಿಂತ ಒಂದರ್ಥದಲ್ಲಿ ಹಾನಿಯೇ ಆಯಿತು. ಸಾಂಪ್ರದಾಯಿಕವಾದ ಕಲೆಯೊಂದರ ಮೂಲ ಸ್ವರೂಪವನ್ನೇ ಬದಲಾಯಿಸುವುದು ಆ ಕಲೆಗೆ ಮಾಡುವ ಅಪಚಾರ ಮುಂತಾದ ಕೆಲವು ಮಾತುಗಳು ಕೇಳಿಬಂದರೂ ಕಾಲಕ್ಕನುಗುಣವಾಗಿ ಮಾರ್ಪಡಿಸಿ ಅದನ್ನು ಜನಪ್ರಿಯಗೊಳಿಸಿದ ಪರಿಯನ್ನು ನೋಡಿದರೆ ಅವು ಸತ್ಯಕ್ಕೆ ದೂರವಾದವು ಎಂದೆನಿಸದಿರವು. ಯಕ್ಷಗಾನವನ್ನು ಒಂದು ಸಮಷ್ಠಿ ಕಲೆಯಾಗಿ ನೋಡುವ, ಇತರೆ ಕಲಾಮಾಧ್ಯಮಗಳ ಸಾಲಿನಲ್ಲಿ ನಿಲ್ಲಿಸಿ ನೋಡುವ ಸಮಗ್ರ ದೃಷ್ಟಿ, ಸೀಮಿತ ಪರದೆಗಳಿಂದಾಚೆಗೆ ಹೊಯ್ಯುವ ಅವರ ಪ್ರಯೋಗಗಳನ್ನು ಅವರ ಬರಹಗಳು ಸಮರ್ಥಿಸುತ್ತವೆ.

---

<u>ಅಡಿ ಟಿಪ್ಪಣಿಗಳು :</u>

೧. ರಂಗನಾಥ್ ಹೆಚ್.ಕೆ. ; 'ಕರ್ನಾಟಕ ರಂಗಭೂಮಿ ', ೨೦೦೦ ( ಎರಡನೆ ಮುದ್ರಣ) ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ - ಬೆಂಗಳೂರು, ಪುಟ -೨೧.

೨. ಶಿವರಾಮ ಕಾರಂತ, (ಸಂ.) ; ಟಿ.ಪಿ. ಅಶೋಕ, (ಆಲೂರು ವೆಂಕಟರಾವ್ ಅವರ ಹೇಳಿಕೆ -ಕಾರಂತ ಅರವತ್ತು, ೧೯೬೨, ಪುಟ -೧).

# ೬.೨. ಪತ್ರಿಕೋದ್ಯಮ ಮತ್ತು ಕಾರಂತರು

" ನನ್ನ ಪತ್ರಿಕೋದ್ಯಮದಿಂದ, ನಾನಿನ್ನೂ ಎಳೆಯ ವಿದ್ಯಾರ್ಥಿ ಎಂಬ ಜ್ಞಾನವಾದರೂ ನನಗೆ ಉಂಟಾಯಿತು. ನನ್ನ ಆ ಉದ್ಯಮ ಮಾತ್ರ ಯಶಸ್ಸನ್ನು ಪಡೆಯಲಿಲ್ಲ. "

"ಸೋತವನಿಗೆ ತಿರುತಿರುಗಿ ಕೆಲಸ ಮಾಡಲು ಅವಕಾಶವಿದೆ. ಗೆದ್ದವನಿಗೆ ಆ ಕೆಲಸ ಮುಗಿದಂತೆಯೇ. ಎಲ್ಲಿಯತನಕ ನಾವು ಕೆಲಸದಲ್ಲಿ ಆಸಕ್ತಿಯನ್ನು ವಹಿಸುತ್ತೇವೋ, ಅದರ ಅವಶ್ಯಕತೆಯನ್ನೂ, ಚೆಲುವನ್ನೂ ಮನಗಾಣುತ್ತೇವೋ ಅಲ್ಲಿಯತನಕ ಕೆಲಸವೇ ಆನಂದ. ಸೋಲು ತಂದುಕೊಡುವ ವಸ್ತು ಪ್ರಪಂಚ ಅರಿವೆಂಬುದು ಕೂಡ ಒಂದು ಆನಂದವೇ. ವ್ಯಕ್ತಿಯು ಎಚ್ಚರವುಳ್ಳವನಾದರೆ, ಸೋಲು ದೊರಕಿಸಿಕೊಡುವ ಅನುಭವಗಳೂ ವ್ಯರ್ಥವಾಗವು. ಮುಂದಿನ ಬದುಕಿಗೆ ಅವು ಸಹಾಯ. ಇವೆಲ್ಲಾ ಸೋಲಿಗನು ಹೇಳುವ ತತ್ವಜ್ಞಾನ - ಎಂದು ತಿಳಿದರೂ ಸರಿಯೇ ; ಅಂತೂ ಅದು ನನ್ನ ಪಾಲಿಗಿರುವ ದೃಷ್ಟಿ."

-ಶಿವರಾಮ ಕಾರಂತ

## ೬.೨. ಪತ್ರಿಕೋದ್ಯಮ ಮತ್ತು ಕಾರಂತರು

ಕಾಲೇಜನ್ನು ತೊರೆದು ಸಮಾಜವೆಂಬ ವಿಶ್ವ ವಿದ್ಯಾಲಯಕ್ಕೆ ಪ್ರವೇಶ ಪಡೆದ ಕಾರಂತರು ವಿವಿಧ ಅಭಿರುಚಿಗಳನ್ನು ಬೆಳೆಸಿಕೊಂಡರು. ಈ ಸಮಾಜದ ವಸ್ತು ಲೋಕದೊಡನೆ ತನ್ನ ಭಾವನೆಗಳು ಸಂಘರ್ಷಕ್ಕಿಳಿಯಲು ಬಹಳಷ್ಟು ಅವಕಾಶಗಳೂ ದೊರೆಯಿತು. ಅಂತಹ ಸಂದರ್ಭದಲ್ಲಿ ದೇಶಸೇವೆ, ಸಮಾಜ ಸುಧಾರಣೆ, ಭಾಷಾ ಸೇವೆಗಳಿಗೆ ಕಂಕಣಬದ್ಧರಾಗಿದ್ದ ಕಾರಂತರು ಇವುಗಳಿಗೆ ಮುಖವಾಣಿವೆಂಬಂತೆ ಪತ್ರಿಕೋದ್ಯಮಕ್ಕೂ ಕೈಹಾಕಿದರು. ತನ್ನ ಧ್ಯೇಯಧೋರಣೆಗಳನ್ನು ಸಮಾಜದ ಮುಂದಿಡಲು ೧೯೨೩ ರಲ್ಲಿ ಕುಂದಾಪುರದಿಂದ 'ವಸಂತ' ಎಂಬ ಕನ್ನಡ ಮಾಸ ಪತ್ರಿಕೆಯನ್ನು ಕಾರಂತರು ಹೊರತಂದರು. ಮೊದಲ ಸಂಪಾದಕೀಯದಲ್ಲಿಯೇ ದೇಶಸೇವೆ, ಈಶಸೇವೆ, ಭಾಷಾಸೇವೆಗಾಗಿ 'ವಸಂತ' ಜನ್ಮ ತಾಳಿದ್ದಾನೆಂಬ ಇಂಗಿತ ಅದರಲ್ಲಿತ್ತು. ಕಾರಂತರ ರಾಷ್ಟ್ರಪ್ರೇಮವನ್ನು ಇಲ್ಲಿ ಕಾಣಬಹುದಾಗಿದೆ. ಬ್ರಿಟೀಷರ ಕ್ರೂರ ಆಡಳಿತದ ಮೇಲೆ ಉಗ್ರವಾದ ಪ್ರತಿಭಟನಾತ್ಮಕವಾದ ಲೇಖನಗಳನ್ನು ಬರೆದ ಯುವಕನ ಆದರ್ಶಗಳನ್ನು ನಾವು ಅದರಲ್ಲಿ ಗುರ್ತಿಸಬಹುದಾಗಿದೆ. ಸಾಮಾಜಿಕ ಸುಧಾರಣೆಯ ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿಷೇಧ, ಬಾಲ್ಯವಿವಾಹ ಖಂಡನೆ, ವಿಧವಾ ವಿವಾಹ ಪ್ರಚಾರ, ಮೂಢನಂಬಿಕೆಯ ವಿರುದ್ಧ ಹೋರಾಟದ ಬಗೆಗಿನ ಬರಹಗಳನ್ನು ಕಾಣಬಹುದಾಗಿತ್ತು. ಜೊತೆಗೆ ಕಥೆ, ಕಾದಂಬರಿ, ವಿಡಂಬನೆ, ಅನುವಾದ, ಸ್ವತಂತ್ರ ಲೇಖನ ಮುಂತಾಗಿ ಹಲವು ಬಗೆಯ ಬರಹಗಳ ಮೂಲಕ ನಡೆಸಿದ ಸಾಂಸ್ಕೃತಿಕ ಸಂಘರ್ಷಗಳನ್ನು ಕಾಣಬಹುದಾಗಿದೆ.

ಕಾರಂತರೊಳಗಿದ್ದ ಬರಹಗಾರನನ್ನು ಹೊರಗೆಳೆದು ತಂದಿದ್ದು - 'ವಸಂತ'. 'ದೋರಣೆಯಿಲ್ಲದ ಜೀವನಕ್ಕಿಂತ ಮರಣವೇ ಮಾನ್ಯವೆಂದು ನಮ್ಮ ನಂಬುಗೆ. ವಸಂತದಂತಹ ಪತ್ರಿಕೆಯೊಂದು ಕರ್ನಾಟಕಕ್ಕೆ ಅವಶ್ಯವಿರುವುದಾದರೆ, ನಾಡಿನವರು ಅದನ್ನು ಉಳಿಸಲು ಕೇವಲ ವ್ಯಾಪಾರಿ ದೃಷ್ಟಿಯಿಂದ ವಸಂತವನ್ನು ನಡೆಯಿಸುವುದಕ್ಕಿಂತ ಪತ್ರಿಕೆಯು ನಿಂತರೂ ನಾವು ಬೇಸರಪಡುವುದಿಲ್ಲ, ಆರ್ಥಿಕವಾಗಿ 'ವಸಂತ' ನೆಲೆಕಂಡುಕೊಳ್ಳಲಾಗದಿದ್ದ ಸಂದರ್ಭದಲ್ಲಿ ಅವರ ಈ ಮಾತುಗಳು ಗಮನಾರ್ಹ. ಎರಡು ವರ್ಷಗಳಲ್ಲಿಯೇ ವಸಂತ ಕೊನೆಗೊಂಡಿತು. ಆದರೆ ಮತ್ತೆ ಅದನ್ನು ಪ್ರಾರಂಭಿಸಿ ೫ ಸಂಪುಟಗಳನ್ನು ಮುನ್ನಡೆಸಿ ೧೯೩೦ ರಲ್ಲಿ ಮತ್ತೆ ನಿಲ್ಲಿಸುವ ಪರಿಸ್ಥಿತಿ ಬಂತು.

ಸ್ವಾತಂತ್ರ್ಯ ನಂತರದಲ್ಲಿ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಪಾಲ್ಗೊಂಡ ಕಾರಂತರು ೧೯೫೧ ರಲ್ಲಿ 'ವಿಚಾರವಾಣಿ ' ಎಂಬ ಹೊಸ ವಾರಪತ್ರಿಕೆಯ ವಿಷಯ ವೈವಿಧ್ಯತೆಯ ಮೂಲಕ ನಾಡು -ನುಡಿಗಳ ಸಮಗ್ರ ಅಭಿವೃದ್ದಿಗೆ ಮಾಧ್ಯವನ್ನಾಗಿಸಿದರು.

ಸ್ವಂತ ಎರಡೂ ಪತ್ರಿಕೆಗಳಿಂದ ಸಾಲವನ್ನು ಹೆಚ್ಚಿಸಿಕೊಂಡರೂ ಕಾರಂತರ ಪತ್ರಿಕೋದ್ಯಮ ಆಸಕ್ತಿ ಕಿಂಚಿತ್ತೂ ಕುಂದಲಿಲ್ಲ. ಇಂಗ್ಲೀಷ್‌ನ ಹೆಸರಾಂತ ಪತ್ರಿಕೆ ಇಲಸ್ಟ್ರೈಟೆಡ್ ವೀಕಲಿಯೂ ಸೇರಿದಂತೆ ನಾಡಿನ ಹಲವಾರು ಪತ್ರಿಕೆ ನಿಯತಕಾಲಿಕಗಳಿಗೆ ಅವರು ನಿರಂತರವಾಗಿ ಲೇಖನ ಬರೆಯತೊಡಗಿದ್ದರು. ಕಡೆಯ ದಿನಗಳಲ್ಲೂ 'ತರಂಗ' ವಾರ ಪತ್ರಿಕೆಯಲ್ಲಿ -ಬಾಲವನದಲ್ಲಿ - ಕಾರಂತಜ್ಜನಾಗಿ ಮಕ್ಕಳ ಅಂಕಣದಲ್ಲಿ ನೂರಾರು ಮಕ್ಕಳ ಸಂದೇಶ -ಕುತೂಹಲಕ್ಕೆ ಸಮಾಧಾನವೀಯುತ್ತಿದ್ದರು.

" ಕಾರಂತರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದು ಪತ್ರಿಕಾ ವ್ಯವಸಾಯದ ಮುಖಾಂತರ. ಅಂದು ಅವರು ಒಂದು ಪತ್ರಿಕೆಯನ್ನು ಪ್ರಾರಂಭಿಸಿದಿದ್ದರೆ ಈಗ ಬೆಳೆದಂತೆ ಅವರು ಬೆಳೆಯುತ್ತಿದ್ದರೋ ಹೇಳಲಾಗುವುದಿಲ್ಲ. ಅವರು ತೊಡಗಿದ ಪತ್ರಿಕಾ ಬರವಣಿಗೆಯ ಕ್ಷೇತ್ರದಲ್ಲಿಯ ಮೊದಲ ಹೆಜ್ಜೆಯಾದಂತೆ ಮುಂದೆ ಅವರು ನಡೆದ ದಾರಿಯಲ್ಲಿಯೇ ಆ ಹೆಜ್ಜೆಗಳು ಬೀಳುವಂತೆ ಮಾಡಿದ ಪ್ರಭಾವ ಶಕ್ತಿಯೂ ಆಯಿತು. ಸಮಕಾಲೀನ ಜೀವನದ ಎಲ್ಲಾ ಮುಖಗಳನ್ನು ಕುರಿತು ವಿಚಾರಗಳ ಪ್ರಚಾರವನ್ನೇ ಗುರಿಯಾಗಿಸಿಕೊಂಡ 'ವಸಂತ' ಎಂಬ ಪಾಕ್ಷಿಕ ಪತ್ರಿಕೆಯನ್ನು ೧೯೨೪ ರಲ್ಲಿ ಪ್ರಾರಂಭಿಸಿದರು. ಅರ್ಧ ಶತಮಾನದ ನಂತರ ಇಂದು ಆ ಪತ್ರಿಕೆಯ ಪುಟಗಳನ್ನು ತಿರುವಿ ಹಾಕಿದರೆ ಅಲ್ಲಿ ಕಾಣುವ ವಸ್ತು ವಿಷಯಗಳ ವೈವಿಧ್ಯ ಹಾಗೂ ಅವನ್ನು ಸಂಪಾದಿಸಿ ಪ್ರಕಟಿಸಿದವರ ಗಂಭೀರ ಉದ್ದೇಶ ಚಕಿತಗೊಳಿಸುತ್ತದೆ. ಮನೋರಂಜನೆಗಿಂತ ಹೆಚ್ಚಾಗಿ ಮನೋವಿಕಾಸವೇ ಪತ್ರಿಕೆಯ ಉದ್ದೇಶವಾಗಿತ್ತು. ಅಸ್ಪ್ರುಶ್ಯೋದ್ಧಾರ, ಕೈನೂಲಿನ ಬಟ್ಟೆ , ಪಾನನಿರೋಧ, ಬ್ರಹ್ಮಚರ್ಯ, ಅಹಿಂಸೆ ಎಂದು ಮುಂತಾದ ಗಾಂಧೀಜಿಯವರ ಆದರ್ಶಗಳನ್ನು 'ವಸಂತ ' ಪತ್ರಿಕೆ ಪ್ರತಿಪಾದಿಸುತ್ತಿತ್ತು. ವಿಧವಾ ವಿವಾಹ, ಧಾರ್ಮಿಕ ಅಂಧಶ್ರದ್ಧೆಯಂಥ ವಿಷಯಗಳಲ್ಲಿ ಪ್ರಗತಿಪರ ವಿಚಾರಗಳನ್ನು ಬೋಧಿಸುತ್ತಿದ್ದರು. ಕಲೆ, ವಿಜ್ಞಾನ, ಚರಿತ್ರೆ, ರಾಜಕೀಯ, ಸಮಕಾಲೀನ ಸಾಮಾಜಿಕ ಸಮಸ್ಯೆಗಳನ್ನು ಕಲಿತು ಓದುಗನಿಗೆ ಯೋಚನಾವಕಾಶವನ್ನು ಒದಗಿಸುವುದೇ ಗುರಿಯಾದ್ದರಿಂದ ಅಂಥ ಎಲ್ಲಾ ವಿಷಯಗಳ ಬಗೆಯಲ್ಲಿ ಬರೆಯಬೇಕಾಗುತ್ತಿತ್ತು "[೧]

ಮೇಲಿನ ವಿ.ಎಂ. ಇನಾಂದಾರ ಅವರ ಹೇಳಿಕೆಯಲ್ಲಿ ಪತ್ರಿಕೆಯು ಕಾರಂತರ ಸಾಹಿತ್ಯ ಬೆಳವಣಿಗೆಗೆ ಪೂರಕವಾದುದು ಮತ್ತು ವಸಂತ ಪತ್ರಿಕೆಯ ವಸ್ತು -ವೈವಿಧ್ಯತೆಗಳನ್ನು ಗಮನಿಸಬಹುದಾಗಿದೆ. ಪ್ರಕಾಶಕರಾಗಿ, ಮುದ್ರಕರಾಗಿ ಆ ಕ್ಷೇತ್ರಗಳಲ್ಲಿನ ಸಾಧಕ -ಬಾಧಕಗಳನ್ನು ಕಂಡವರು ಕಾರಂತರು. ಅಲ್ಲಿ ಅವರು ಅನುಭವಿಸಿದ ಕಷ್ಟ -ನಷ್ಟಗಳನ್ನು ಅವರ ಆತ್ಮಕಥಾನಕಗಳಲ್ಲಿ ಗುರುತಿಸಬಹುದಾಗಿದೆ.

---

<u>ಅಡಿ ಟಿಪ್ಪಣಿಗಳು :</u>

೧. ಅಶೋಕ ಟಿ.ಪಿ. (ಸಂ.) ; 'ಕನ್ನಡ ಸಾಹಿತ್ಯ ಈ ಶತಮಾನದ ನೋಟ -ಶಿವರಾಮ ಕಾರಂತ ', ವಿ.ಎಂ.ಇನಾಂದಾರ ಅವರ ಹೇಳಿಕೆ ಪುಟ -೩೮,೩೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ೬.೩. ಧಾರ್ಮಿಕ ವಿಚಾರಗಳು ಮತ್ತು ಕಾರಂತರು

" ನಾನು ಬದುಕಿನ ನಾಳೆಯ ಎಂದರೆ ಪರರ ಚಿಂತೆಯನ್ನು ಹೊತ್ತವನಲ್ಲ. ಆತ್ಮ, ಪ್ರಾರಬ್ಧ ಕರ್ಮ, ಪರಲೋಕಗಳ ನಂಬಿಕೆಗಳನ್ನು ಬೆಳೆಯಿಸಿ ಇಂದನ್ನು ತಾತ್ಸಾರದಿಂದ ಕಂಡವನೂ ಅಲ್ಲ ; ಕಾಣುವವನೂ ಅಲ್ಲ. ಆದುದರಿಂದ ಇಹವೇ ನನ್ನೆಲ್ಲಾ ಸಾಧನೆಗಳ ರಂಗಸ್ಥಳ. "

"ಮಾನವನು ನಿರ್ಮಿಸಬಲ್ಲ ದೈವ, ಇಲ್ಲವೇ ದೈವತ್ವದ ಗುಣಗಳು, ಅವ ಇತಿ-ಮಿತಿಗಳಿಂದ ರೂಪಗೊಳ್ಳಬೇಕೇ ಹೊರತು ಅನ್ಯತಃ ಸಾಧ್ಯವಿಲ್ಲ."

-ಶಿವರಾಮ ಕಾರಂತ

## ೬.೩. ಧಾರ್ಮಿಕ ವಿಚಾರಗಳು ಮತ್ತು ಕಾರಂತರು.

ಧಾರ್ಮಿಕ ವಿಚಾರಗಳು, ಆಧ್ಯಾತ್ಮಿಕವಾದ ವಿಚಾರಗಳನ್ನು ಪ್ರಮುಖವಾಗಿಸಿಕೊಂಡ ನವೋದಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಶಿವರಾಮ ಕಾರಂತರೂ ಆರಂಭದಲ್ಲಿ ದೈವ, ಭಕ್ತಿ, ಮೋಕ್ಷ, ಪರಮಾತ್ಮ ಮೊದಲಾದ ವಿಚಾರಗಳಲ್ಲಿ ಶ್ರದ್ಧೆಯನ್ನಿರಿಸಿದ್ದರು. ಗಾಂಧೀಜಿಯವರ ವರ್ಚಸ್ಸಿನಿಂದ ಈ ಶ್ರದ್ಧೆ ಇನ್ನಷ್ಟು ಬೆಳೆಯಿತು. ರಾಮಕೃಷ್ಣ ಪರಮಹಂಸರ ಬರಹಗಳನ್ನೋದಿದುದರಿಂದ ಭಕ್ತಿ ಮಾರ್ಗದಲ್ಲಿ ಇನ್ನು ಹೆಚ್ಚಿನ ಆಸಕ್ತಿಯನ್ನು ಬೆಳೆಸಿಕೊಂಡರು. ಆದರೂ ಕಾರಂತರ ಧಾರ್ಮಿಕ ವಿಚಾರಗಳು ವೈಚಾರಿಕವಾದ ವಾಸ್ತವ ಬದುಕಿನ ನೆಲೆಯಲ್ಲಿ ರೂಪಗೊಂಡಿರುವುದನ್ನು ಗುರುತಿಸಬಹುದಾಗಿದೆ.

ಬಾಳ್ವೆ ಸ್ವೀಕಾರಕ್ಕಿದೆ ನಿರಾಕರಣೆಗೆ ಅಲ್ಲ ಎಂಬುದು ಕಾರಂತರ ವಾದ. ಬದುಕನ್ನೇ ದೇವರೆಂದು ತಿಳಿದು ಬದುಕಿದವರು. ಅವರಿಗೆ ದೇವರಿಗಿಂತ ಬದುಕು ಮುಖ್ಯವಾದದ್ದು. ಅವರ ಮುಂದಿನ ಮಾತುಗಳಲ್ಲಿ ಈ ವಿಚಾರಗಳನ್ನು ನಾವು ಗಮನಿಸಬಹುದಾಗಿದೆ.

> '' ತನ್ನ ಸೃಷ್ಟಿಯನ್ನೇ ಸದಾ ನೆನೆಯುತ್ತ, ಕಣ್ಣೆದುರಿನ ದರ್ಶನವನ್ನು ಪಡೆಯುವುದು ಭಕ್ತನ ಪ್ರಯತ್ನ. ಕಲಾವಿದನ ಸೌಂದರ್ಯ ದರ್ಶನದ ಹಾದಿಯೂ ಹೀಗೇನೆ. ಆದುದರಿಮದ, ನನಗೆ ದೇವರಿಗಿಂತಲೂ ಬಾಳೇ ಮುಖ್ಯವೆನಿಸತೊಡಗಿತು. ಗೌತಮ ಬುದ್ಧ ಅದಕ್ಕಾಗಿಯೇ ಏನೋ ದೇವರ ಹೆಸರನ್ನೇ ಎತ್ತಲಿಲ್ಲ. ಆತ ಬದುಕನ್ನು ತೀರ ಒತ್ತಿ ಹೇಳಿದ. ಅವನದು ಆಸಕ್ತಿವಾದವೂ ಅಲ್ಲ ; ನಾಸ್ತಿಕವಾದವೂ ಅಲ್ಲ. ಬಾಳಿದಷ್ಟು ಕಾಲ, ವಿಶ್ವದ ಬಾಳ್ವೆಯೊಡನೆ ಬೆರೆತು ಒಂದಾಗುವುದೇ ಆ ವಾದದ ತಿರುಳು. ಆಗ ಬಾಳಿನ ಸಾವು ನೋವುಗಳು ಸುಖ-ದುಃಖಗಳು ಅರ್ಥಪೂರ್ಣವಾಗುತ್ತವೆ ''[೧]

ಒಬ್ಬ ಭಕ್ತನಾಗಲಿ, ಕಲಾವಿದನಾಗಲಿ, ಪ್ರತಿಯೊಬ್ಬರಿಗೂ ಸಹ ಅವರದೇ ಆದಂತಹ ದರ್ಶನವಿರುತ್ತದೆ. ಏಕೆಂದರೆ ಲೋಕೋಭಿನ್ನರುಚಿಃ ಅಂತೆಯೆ ಕಾರಂತರಿಗೂ ಒಂದು ದರ್ಶನವಿತ್ತು. ಅದು ಕಣ್ಣಿಗೆ ಕಾಣದ ದೇವರಾಗಿರದೆ, ಜೊತೆಯಲ್ಲಿಯೇ ಇರುವ ವಾಸ್ತವ ಬದುಕಾಗಿತ್ತು. ಅದು ಅವರಿಗೆ ಮುಖ್ಯವಾಗಿತ್ತೇ ವಿನಃ ಇನ್ನಾವುದೋ ಆಗಿರಲಿಲ್ಲ : ಹೀಗೆ ಬುದ್ಧನಂತೆ ನನ್ನದೂ ಆಸಕ್ತಿವಾದವೂ ಅಲ್ಲ , ನಾಸ್ತಿಕವಾದವೂ ಅಲ್ಲ ಎಂಬುದಾಗಿ ತಮ್ಮ ಧಾರ್ಮಿಕ ವಿಚಾರಗಳ ಬಗ್ಗೆ ಹೇಳಿಕೊಂಡಿರುವ ಮಾತುಗಳನ್ನು ಮೇಲಿನ ಉದ್ಧರಣೆಯ ಅಂಶಗಳಲ್ಲಿ ಗಮನಿಸಬಹುದಾಗಿದೆ.

ವ್ಯಕ್ತಿ ಜೀವನದ ವಿಕಾಸ ಅವನು ಬದುಕುವುದರಿಂದಲೇ ಆಗಬೇಕಾಗುತ್ತದೆ. ಈ ಬದುಕಿನಲ್ಲಿ ಮನುಷ್ಯ ಎಷ್ಟೆಷ್ಟು ಸೂಕ್ಷ್ಮವಾಗಿ, ಹೆಚ್ಚಾಗಿ ಬದುಕನ್ನು ಆಸ್ವಾದಿಸುವ ಶಕ್ತಿಯನ್ನು ಬೆಳೆಯಿಸಿಕೊಳ್ಳುತ್ತಾನೋ ಅಷ್ಟಷ್ಟು ಅಧಿಕವಾದ ಅನುಭವಗಳಿಂದ ಪರಿಣಾಮಗೊಳ್ಳುತ್ತಾನೆ. ಆ ಅನುಭವದ ಶಕ್ತಿಯನ್ನು ಬೆಳೆಸಿಕೊಂಡು ಎಷ್ಟೆಷ್ಟು ವಿಸ್ತಾರವಾದ ಬದುಕಿಗೆ ಮುಖಾಮುಖಿಯಾಗುತ್ತಾನೋ ಅಷ್ಟಷ್ಟು ಬಹುಮುಖವಾದ ಪ್ರಯೋಜನಕಾರಿಯಾದ 'ಅನುಭವ'ಗಳನ್ನು ಅವನು ಪಡೆಯಬಹುದು ಎಂಬುದು ಬದುಕಿನ ಬಗೆಗೆ ಕಾರಂತರು ಕಟ್ಟಿಕೊಡುವ ವಿಚಾರವಾಗಿದೆ. 'ನಮಗೆ ಬದುಕಿನಿಂದ ಉಪಯೋಗವಾಗಬೇಕಾದರೆ ಜ್ಞಾನ ದೊರಕಬೇಕಾದರೆ, ನಮ್ಮ ಜೀವನ ಆದಷ್ಟು ವಿಶಾಲವಾಗಬೇಕು. ನಮ್ಮನ್ನು ನಮ್ಮ ಮನೆಯವರನ್ನು, ಸಮಾಜದವರನ್ನು ಮೀರಿಸಿ ಅದು ಮನುಷ್ಯ ಕುಟುಂಬಕ್ಕೆ ಹರಿಯಬೇಕು. ಅಲ್ಲಿಯೂ ಮೇರೆಯನ್ನು ಹೊಂದದೆ, ಜೀವ ಕುಟುಂಬಕ್ಕೂ ಯಾವತ್ತೂ ಸೃಷ್ಟಿಗೂ ವಿಶಾಲಿಸಲು ಪ್ರಯತ್ನಿಸಬೇಕು'- ಎಂದು ಬಾಳ್ವೆಯೇ ಬೆಳಕು ಕೃತಿಯಲ್ಲಿ ಹೇಳಿರುವ ಕಾರಂತರ ಮಾತುಗಳಲ್ಲಿ ಧಾರ್ಮಿಕ ವಿಚಾರಗಳಲ್ಲಿನ ಅವರ ಮನಸ್ಸನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ಬದುಕಿನ ಸಾರ್ಥಕತೆ ಅಡಗಿರುವುದು ಸಮಾಜಮುಖಿಯಾದ ವಿಶಾಲವದ ಮನೋಧರ್ಮದಲ್ಲಿ ಎಂಬ ವಿಶ್ವಮಾನವತೆಯನ್ನು ಪ್ರಸ್ತುತಪಡಿಸುತ್ತಾರೆ. ನುಡಿದಂತೆ ನಡೆದ ಆದರ್ಶವಾದಿ ಕಾರಂತರು. ಅವರ ಊರಿನ ಸೋಮಯಾಜಿಗಳ ಮನೆತನದವರು ಅಜಯಾಗ ಮಾಡುವ ಯೋಚನೆ ಮಾಡಿ ತಾಜಾ 'ಬಕರ 'ವನ್ನೇ ಬಲಿಕೊಡಲು ಸಹಾಯಧನವನ್ನು ಒಟ್ಟು ಮಾಡುವಾಗ ಅದನ್ನು ವಿರೋಧಿಸಿದ್ದು , ಸ್ವತಃ ಅವರೇ ಅಂತರ್ಜಾತಿ ವಿವಾಹವಾದುದು ಅವರ ಮೇಲಿನ ವಿಚಾರಗಳನ್ನು ಸಮರ್ಥಿಸುವಂತಹವು.

> " ಕಾರಂತರು ಹುಟ್ಟಿನಿಂದ ಬ್ರಾಹ್ಮಣರೇ ಆಗಿದ್ದರೂ, ಅಂದರೆ ವೈದಿಕ ಪುರೋಹಿತಶಾಹಿ ಹಿನ್ನೆಲೆಯಿಂದ ಬಂದವರೇ ಆಗಿದ್ದರೂ 'ಭಾರತೀಯತೆ 'ಯ ಹೆಸರಿನಲ್ಲಿ ವೈದಿಕ ಸಂಸ್ಕೃತಿಯನ್ನು ಮೆರೆಸುವುದರಲ್ಲಿ , ಕೀರ್ತಿಸುವುದರಲ್ಲಿ , ವೈಭವೀಕರಿಸುವುದರಲ್ಲಿ ಅವರು ಉತ್ಸಾಹ ತೋರಲಿಲ್ಲ, ಮತಧರ್ಮ, ದೇವರ ಅಸ್ತಿತ್ವ ಭಗವತ್ ಸಂಕಲ್ಪ ವಿಧಿ ವಿಲಾಸ, ಜನ್ಮಾಂತರಗಳ ಬಗೆಗಿನ ನಂಬಿಕೆ ಇವುಗಳನ್ನೆಲ್ಲಾ ಅವರು ನಿರಾಕರಿಸಿದರು. ಕುವೆಂಪು ಅವರು ಭಾರತೀಯ ಸಂಸ್ಕೃತಿಯ ಹಿರಿಮೆ ಎಂದು ಕೀರ್ತಿಸುವ 'ಆಧ್ಯಾತ್ಮ 'ದ ಬಗ್ಗೆ ಕೂಡ ಕಾರಂತರು ಸಿನಿಕ ಧೋರಣೆ ತಳೆದರು. ಕಾರಂತರ ಈ ನಿಲುವು, ದೃಷ್ಟಿ ಕುವೆಂಪು ಅವರ ನಿಲುವಿಗಿಂತ ಡಾ.ಅಂಬೇಡ್ಕರ್ ಅವರ ನಿಲುವಿಗೆ ಹತ್ತಿರವಾಗಿದೆಯೇನೋ ಎಂದು ಭಾಸ ಹುಟ್ಟಿಸುವಂತಿದೆ "[3]

ವಿಮರ್ಶಕರಾದ ಪ್ರೊ. ಜಿ.ಹೆಚ್.ನಾಯಕ ರವರ ಮೇಲಿನ ಮಾತುಗಳಲ್ಲಿ ಆಧ್ಯಾತ್ಮಿಕ ವಿಚಾರದ ಬಗೆಗೆ ಕುವೆಂಪು ರವರ ಧೋರಣೆಗಿಂತ ಕಾರಂತರ ಧೋರಣೆ ಭಿನ್ನವಾಗಿ

ಅಂಬೇಡ್ಕರ್‌ರವರ ಧೋರಣೆಗೆ ಹತ್ತಿರವಾಗಿರುವುದನ್ನು ಮತಧರ್ಮ, ದೇವರ ಅಸ್ತಿತ್ವ ವಿಧಿ ಮುಂತಾದವುಗಳ ನಿರಾಕರಣೆಯ ಮೂಲಕ ವಾಸ್ತವವಾದಿಯಾಗಿ ಬೆಳೆದವರು ಕಾರಂತರು ಎಂಬುದನ್ನು ಸಮರ್ಥಿಸಿದ್ದಾರೆ.

ದೇವರನ್ನು ಕುರಿತು ಕಾರಂತರು ಅನೇಕ ಕಡೆಗಳಲ್ಲಿ ಚರ್ಚಿಸಿದ್ದಾರೆ. ಆ ಕಲ್ಪನೆಯನ್ನು 'ಭೀತಿಯಿಂದ ಹುಟ್ಟಿದ ಮನೋಧರ್ಮ' ಎಂದು ನೇರವಾಗಿ ಖಂಡಿಸಿ, ಚರ್ಚಿಸಿದ್ದಾರೆ. 'ಬಾಳ್ವೆಯೇ ಬೆಳಕು ' ಕೃತಿಯಲ್ಲಿ ಅವರ ನಿಲುವನ್ನು ಕಾಣಬಹುದು. ಈ ವಿಚಾರಗಳ ಪ್ರೇರಣೆಯಿಂದಾಗಿಯೇ ಡಿ.ವಿ.ಜಿ.ಯವರು 'ಬಾಳಿಗೊಂದು ನಂಬಿಕೆ ', 'ಸಂಸ್ಕೃತಿ ', 'ದೇವರು : ಒಂದು ವಿಚಾರ ಲಹರಿ' ಕೃತಿಗಳು ಎ.ಎನ್.ಮೂರ್ತಿರಾಯರು ಬರೆದ 'ದೇವರು' ಕೃತಿ ಕಾರಂತರ ಕೃತಿಯ ಮೂಲದಲ್ಲಿಂದ್ದಂತಹ ಸ್ಪಷ್ಟತೆ, ನಿಖರತೆಗಳಿಲ್ಲದೆ ಪೇಲವತೆಯತ್ತ ವಾಲಿರುವುದನ್ನು ಗಮನಿಸಬಹುದಾಗಿದೆ.

ಕಾರಂತರ ಧಾರ್ಮಿಕ ವಿಚಾರಗಳನ್ನು ಗಮನಿಸಿದ ನಮಗೆ ಅವರ ಪತ್ನಿಯಾದ ಶ್ರೀಮತಿ ಲೀಲಾ ಕಾರಂತರ ಧಾರ್ಮಿಕ ವಿಚಾರಗಳಲ್ಲಿ ತದ್ವಿರುದ್ಧವಾದ ಧೋರಣೆಗಳನ್ನು ಗುರುತಿಸಬಹುದಾಗಿದೆ. ಸಾಯಿಬಾಬಾನ ಪರಮಾತ್ಮ ಭಕ್ತರಾಗಿದ್ದ ಅವರು ಬಾಬಾನ ಪವಾಡಗಳನ್ನು ನಂಬುತ್ತಿದ್ದವರು. 'ಸತ್ಯಸಾಯಿ - ನನ್ನ ಜೀವನವನ್ನು ಪ್ರವೇಶಿಸಿದ್ದು ನನ್ನ ಸೌಭಾಗ್ಯ. ಎಷ್ಟು ಪುಣ್ಯ ಮಾಡಿದ್ದೆ ಆ ಪಾದಗಳನ್ನು ಮುಟ್ಟಲು' ಮತ್ತು 'ನನಗೆ ಒಂದು ಸಂಪಿಗೆ ಹೂವು ಸೃಷ್ಟಿಸಿಕೊಟ್ಟರು. ಮೊದಲ ಮಂಗಳವಾರ ಉಲ್ಲಾಸನ ಪರೀಕ್ಷೆಗಾಗಿ Pray ಮಾಡಿದ್ದೆ. ಹಾಗಾಗಿ ಸೃಷ್ಟಿ ಮಾಡುವಾಗಲೇ 'ಮಗನಿಗೆ ' ಎಂದು ಹೇಳಿ ಕೊಟ್ಟರು. ಎರಡನೇ ಮಂಗಳವಾರ, ತುಂಬಾ ವಿಭೂತಿ ಸೃಷ್ಟಿಸಿ ಮುಂದೆ ನಿಂತು ಪೂರಾ ಬಾಯಿಗೆ ಹಾಕು ಎಂದು ಹೇಳಿ ತಿಂದು ಮುಗಿಯುವವರೆಗೂ ಮುಂದೇ ನಿಂತು ಕೊಂಡರು ' ಎಂಬುದಾಗಿ ಹೇಳಿಕೊಳ್ಳುವ ಮೂಲಕ ಲೀಲಾ ಕಾರಂತರು ತಮ್ಮ ವಾಸ್ತವ, ವೈಚಾರಿಕವಾದ ನಿಲುವನ್ನು ಕಳೆದುಕೊಂಡಿದ್ದರು. ಬಿ.ಲೀಲಾಭಟ್ ಅವರು ಸಂಪಾದಿಸಿರುವ 'ಲೀಲಾಕಾರಂತ ನೆನಪಿನ ಸಂಪುಟ ' ಎಂಬ ಕೃತಿಯಲ್ಲಿ - ಸ್ವಾಮಿ ಮತ್ತು ನಾನು ಎಂಬ ಲೇಖನದಲ್ಲಿ ಈ ವಿಚಾರಗಳನ್ನು ಲೀಲಾ ಕಾರಂತರೆ ಸ್ಪಷ್ಟಪಡಿಸಿದ್ದಾರೆ. 'ಓಂ ಸಾಯಿರಾಮ ', 'ನಾಮಶಕ್ತಿ ', 'ಶಂಕರಾ', 'ನಾ ಆಗ ಬಯಸುವೆ ', 'ಮನದ ಮರುಭೂಮಿಯಲ್ಲಿ ' ಹಾಗೂ ಅವರ ಅನೇಕ ಪತ್ರಗಳಲ್ಲಿ ಅವರ ಧಾರ್ಮಿಕ ವಿಚಾರಗಳನ್ನು ತಿಳಿಯಬಹುದಾಗಿದೆ. ಇಂತಹ ಸಂದರ್ಭದಲ್ಲೂ ಕಾರಂತರು ತಮ್ಮದೇ ಆದ ವೈಚಾರಿಕವಾದ ಮನಸ್ಸನ್ನು ಧಾರ್ಮಿಕ ವಿಚಾರಗಳಲ್ಲಿ ಹೊಂದಿದ್ದರು ಎಂಬುದು ಅವರ ಸಮಾಜಮುಖಿ ಧಾರ್ಮಿಕತೆಯನ್ನು ಪ್ರತಿನಿಧಿಸುವಂತಹದ್ದಲ್ಲದೆ ಬೇರೇನೂ ಅಲ್ಲ.

## ಅಡಿ ಟಿಪ್ಪಣಿಗಳು :

೧. ಶಿವರಾಮ ಕಾರಂತ, 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಎಸ್.ಬಿ.ಎಸ್. ಪಬ್ಲಿಷರ್ಸ್ ಬೆಂಗಳುರು, ೨೦೦೬ (ಹತ್ತನೇ ಮುದ್ರಣ) ಪುಟ -೧೨೪, ೧೨೫.

೨. ನಾಯಕ ಜಿ.ಎಚ್. ; 'ಶಿವರಾಮ ಕಾರಂತ-ಸಾಂಸ್ಕೃತಿಕ ಅನುಸಂಧಾನ ', (ಸಮಾರೋಪ ಭಾಷಣದ ಲೇಖನ) ಸಂ. - ಗುರುಲಿಂಗ ಕಾಪಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩., ಪುಟ -೧೭೯.

# ೬.೪. ಕಾರಂತರು ಮತ್ತು ಸಿನಿಮಾ

'' ನಮ್ಮ ಪಂಚೇಂದ್ರಿಯಗಳ ಅನುಭವಗಳನ್ನು ಪರರಿಗೆ ತಿಳಿಸುವ ಸಂದರ್ಭಗಳಲ್ಲಿ - ಕೇವಲ ಶ್ರವ್ಯ ಮಾಧ್ಯಮ ಪಾತ್ರ ವಹಿಸುವುದಕ್ಕಿಂತ ಅಧಿಕವಾಗಿ, ದೃಕ್- ಬಿಂಬ ಮಾಧ್ಯಮವೇ ಪಾತ್ರ ವಹಿಸುತ್ತಾ ಬಂದಿದೆ. ಅಂಥ ವಾಕ್ -ಬಿಂಬಗಳು ಭಾಷೆಯ ಸಂಪತ್ತಾಯಿತಾದರೆ ದೃಕ್ ಬಿಂಬಗಳು ನಮ್ಮೆಲ್ಲಾ ಸಂವೇದನೆಗಳನ್ನು ಕಣ್ಮುಂದೆ ತರುವ ಶಕ್ತಿಯನ್ನು ಉಳಿಸಿಕೊಂಡುದರಿಂದ ನಾಟಕ, ನೃತ್ಯ, ಗೀತಾದಿಗಳ ಸಂಗಮ ಸಾಧ್ಯವಾಯಿತು. ''

''ವಿಶ್ವದ 'ನಾಳೆ ' ಎಷ್ಟು ವಿಚಿತ್ರವಾದ ಪ್ರಶ್ನೆಯೋ, ನಮ್ಮೆಲ್ಲರ 'ನಾಳೆಯು' ಗೂಡವೂ ಅಷ್ಟೇ ವಿಚಿತ್ರವಾಗಿದೆ. ಅಂತಹ ನಾಳೆಗೆ ನವ್ಯತೆ ಇದೆ, ಹುರುಪು ಇದೆ. ನನ್ನ ಸುತ್ತಣ ಪ್ರಪಂಚವು ಚಿರನವ್ಯತೆಗೆ ಅವಕಾಶವನ್ನು ಕೊಡಬೇಕೆಂಬುದೇ ನನ್ನ ಬಯಕೆ. ಮನಸ್ಸು ಹರಿತವಾಗಿದ್ದು, ಚುರುಕಾಗಿದ್ದು , ಹಾವಿನ ನಾಲಿಗೆಯಂತೆ ಮುಂದಿನ ದಾರಿ ಹುಡುಕುತ್ತಲೇ ಇರಬೇಕು. ''

-ಶಿವರಾಮ ಕಾರಂತ

## ೬.೪. ಕಾರಂತರು ಮತ್ತು ಸಿನಿಮಾ :

ಕಾರಂತರು ಇನ್ನಿತರ ಕಲೆಗಳಂತೆ ಸಿನಿಮಾದಲ್ಲೂ ಸಹ ಕೈಯಾಡಿಸಿರುವಂತಹವರು. ರಷ್ಯಾ ದೇಶದಲ್ಲಿ ಸಿನೆಮಾ ಉಪಯೋಗಿಸಿ ಜನರಿಗೆ ವಿನೋದವನ್ನೂ, ವಿದ್ಯೆಯನ್ನೂ ಏಕ ಕಾಲಕ್ಕೆ ಕಲ್ಪಿಸಿ ಹೆಚ್ಚಿನ ಜನಜಾಗೃತಿ ಹುಟ್ಟಿಸಿದ್ದರೆಂದು ತಿಳಿದ ಕಾರಂತರು ಚಲನಚಿತ್ರದ ಮೂಲಕ ನಾವೂ ಏಕೆ ಪ್ರಚಾರ ಮಾಡಬಾರದೆಂದು ರಷ್ಯಾದಲ್ಲಿ ವಾಸವಾಗಿದ್ದ ಸ್ನೇಹಿತರಿಂದ ರಷ್ಯಾದ ಎಜುಕೇಷನಲ್ ಫಿಲ್ಮ್‌ಗಳನ್ನು ಕುರಿತು ವಿಶೇಷ ಮಾಹಿತಿಗಳನ್ನು ತರಿಸಿಕೊಂಡು ಸಿನಿಮಾದ ಜ್ಞಾನವನ್ನು ಪಡೆದುಕೊಂಡರು. ಅಸ್ಪೃಶ್ಯತೆಯ ವಿಷಯದಲ್ಲಿ ಅವರೆ ಬರೆದಿದ್ದ 'ಡೋಮಿಂಗೊ ' ಎಂಬ ಕಥೆಯನ್ನು ಮಿತ್ರರಿಂದ ಅಭಿನಯಿಸುವಂತೆ ಮಾಡಿ ಚಿತ್ರವನ್ನು ತೆಗೆದರು. ಕಾರಂತರ ಈ 'ಡೋಮಿಂಗೊ ' ವನ್ನು ಕುರಿತು ಗಿರೀಶ್ ಕಾಸರವಳ್ಳಿಯವರು ಈ ರೀತಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

> " ಕಾರಂತರ 'ಡೋಮಿಂಗೊ' ಹಲವಾರು ಕಾರಣಗಳಿಂದ ವಸ್ತು ವಿಷಯದಲ್ಲಿ ಬಹಳ ಕುತೂಹಲಕಾರಿಯಾಗಿ ಕಾಣುತ್ತ ಹೋಗುತ್ತದೆ. ಅಸ್ಪೃಶ್ಯರ ಕಥೇ ಅನ್ನೋ ಒಂದು ಚೌಕಟ್ಟು ಮಾತ್ರ ಇದೆ. ಆದರೆ ಕಾರಂತರ ಆ ಕಾಲದ Concern ಗಳನ್ನು ಗಮನದಲ್ಲಿ ಇಟ್ಟುಕೊಂಡರೆ ಇದು ೧೯೩೫ -೪೦ರ ಒಳಗೆ ಮಾಡಿರುವ ಚಿತ್ರ. ಏಕೆಂದರೆ ಅದೇ ಕಾಲದಲ್ಲಿ ಇವರು ವೇಶ್ಯೆಯರ ಬಗ್ಗೆ ಯೋಚನೆ ಮಾಡುತ್ತ ಇದ್ದರು. ಕೆಲವು ಸಾಮಾಜಿಕ ಆಂದೋಲನಗಳಲ್ಲಿ ಭಾಗವಹಿಸಿದ್ದರು. ಪತ್ರಿಕೋದ್ಯಮದಲ್ಲಿ ದುಡಿಯುತ್ತಿದ್ದರು. ಆ ಕಾಲದ ಸಮಸ್ಯೆಗಳು ಏನಿರುತ್ತದೊ ಅದನ್ನು ಜನರಿಗೆ ತೋರಿಸುವ ಜಾಗೃತಿಯನ್ನು ಹುಟ್ಟಿಸುವ ಒಂದು ಪ್ರಯತ್ನ ಮಾಡುತ್ತ ಇದ್ದರು. ಪ್ರಾಯಶಃ ಅದನ್ನು ಗಮನದಲ್ಲಿ ಇಟ್ಟುಕೊಂಡರೆ ಡೋಮಿಂಗೊ ಕೂಡ ಅಂಥ ಒಂದು ಚಿತ್ರವಾಗಿತ್ತೇನೋ ಎಂದು ತಿಳಿದುಕೊಳ್ಳಬಹುದು. ತಾನು ಆರಿಸಿಕೊಂಡ ವಸ್ತುವಿನ ಎಲ್ಲ ಸಾಧ್ಯತೆಗಳನ್ನು ಹುಡುಕಿಕೊಂಡು ಹೊರಡುವುದಕ್ಕಿಂತ ಮುಖ್ಯವಾಗಿ ಇದು ಒಂದು ರೀತಿಯಲ್ಲಿ ಜನರಿಗೆ ವಿಚಾರವನ್ನು ತಿಳಿಸುವುದಕ್ಕೆ ಬೋಧನೆಯನ್ನು ಮಾಡುವುದಕ್ಕೆ , ಅವರ ಆಗಿನ ನಾಟಕಗಳು ಹೆಚ್ಚು ಕೇಂದ್ರಿತವಾಗಿವೆ ಎನ್ನಬಹುದು "[೧]

ಕಾರಂತರ ಸಮಾಜಮುಖಿಯಾದ ಆಂದೋಲನಗಳು, ಸಾಮಾಜಿಕ ಸಮಸ್ಯೆಗಳನ್ನು ಕುರಿತಾದ ಚಿಂತನೆಗಳು ಜನರಿಗೆ ಜಾಗೃತಿಯನ್ನು ಉಂಟು ಮಾಡುವ ಆಲೋಚನಾ ಕ್ರಮಗಳನ್ನು

ಅಭಿವ್ಯಕ್ತಿಸುವಂತಹದ್ದು. ಅವರ 'ಡೋಮಿಂಗೋ' ಚಲನಚಿತ್ರ. ಜನರಿಗೆ ಅವರ ಈ ಎಲ್ಲಾ ವಿಚಾರಗಳನ್ನು ತಿಳಿಸುವುದಕ್ಕೆ ಸಿನಿಮಾವನ್ನು ಮಾಧ್ಯಮವನ್ನಾಗಿಸಿಕೊಂಡರು ಎಂಬುದನ್ನು ಮೇಲಿನ ಮಾತುಗಳು ಪುಷ್ಠೀಕರಿಸುತ್ತವೆ.

ನಂತರ್ರದಲ್ಲಿ ಸಾಮಾನ್ಯ ತೆರನ ಒಂದು ಪ್ರಣಯ ಮಿಶ್ರಿತ ಕಥೆಯಾದಾರಿತ 'ಭೂತ ರಾಜ್ಯ' ಎಂಬ ಸಿನೆಮಾವನ್ನು ತೆಗೆದರು. ಆದರೆ ವಾಕ್ ಚಿತ್ರಗಳು ಬರಲು ಪ್ರಾರಂಭವಾದ ಆ ಸಂದರ್ಭದಲ್ಲಿ 'ಮೂಕಿ ' ಚಿತ್ರಗಳಿಗೆ ಅಷ್ಟು ಬೆಲೆ ಇಲ್ಲದಾಯಿತು.

> '' ಈ ಮಾಧ್ಯಮಕ್ಕೆ ನಾನು ಕೈತೊಡಕಿಸಿದ್ದು ಅನಾದಿ ಕಾಲದಲ್ಲಿ ; ಅದರ ಬೃಹತ್ ಸ್ವರೂಪ ಏನೆಂದು ತಿಳಿಯುವ ಮುಂಚೆಯೇ, ನಾಲ್ಕು ದಶಕಗಳ ಮುಂಚೆ ತಿರುಗಿ ಅದೇ ಕೆಲಸ ಮಾಡಿದೆ. 'ಇನ್ನು ತಿರುಗಿ ನೀವು ಇದೇ ಕೆಲಸವನ್ನು ಮಾಡಬಯಸುತ್ತೀರಾ ? ಆರ್ಥಿಕ ಯಶಸ್ಸು ದೊರೆತರೆ ' ಎಂದು ಯಾರಾದರೂ ನನ್ನನ್ನು ಕೇಳಿದರೆ ಅಂಥ ಬಯಕೆ ನನಗಿಲ್ಲ - ಅಂದೇನು. ಮಾಡಿದ್ದನ್ನೇ ಮಾಡುವ ಅಪೇಕ್ಷೆಯಿಲ್ಲ. ಆದರೆ ಯಾವುದಾದರೂ ಒಂದು ಮಕ್ಕಳ ಚಿತ್ರವನ್ನೋ (ಅಣಕವಾಡ Mine) ಗೀತ ಕಥಾನಕವನ್ನು (Opera) ಮಾಡಲು ಮನಸ್ಸು ಹವಣಿಸಬಾರದೆಂದಿಲ್ಲ ''[೨]

ಎಂಬುದಾಗಿ ತಮ್ಮ ಆತ್ಮ ಕಥಾನಕವಾದ 'ಸ್ಮೃತಿ ಪಟಲದಿಂದ ಸಂಪುಟ -೨ ರಲ್ಲಿ ಅವರೇ ಹೇಳಿಕೊಂಡಿರುವ ವಿಚಾರಗಳನ್ನು ಮೇಲಿನ ಉದ್ದರಣೆಯ ಮಾತುಗಳಲ್ಲಿ ಗಮನಿಸಬಹುದಾಗಿದೆ. ಮಾಡಿದ್ದನೇ ಮಾಡುವ ಅಪೇಕ್ಷೆ ಇಲ್ಲವೆಂದು ಹೇಳುವ ಕಾರಂತರು, ಹೊಸ ದೃಷ್ಟಿಕೋನಗಳ, ಇದುವರೆಗೆ ಆಗದೇ ಇರುವ ಸೃಜನಶೀಲವಾದ ಚಲನಚಿತ್ರಗಳನ್ನು ತಯಾರಿಸುವ ಮನಸ್ಸು ಇದ್ದೇ ಇದೆ ಎಂಬ ಅವರ ಧೋರಣೆಗಳನ್ನು ಇಲ್ಲಿ ಗಮನಿಸಬಹುದಾಗಿದೆ.

ನಂತರದಲ್ಲಿ ಕಾರಂತರಿಗೂ ಸಿನಿಮಾಗೂ ಇರುವ ನಂಟು ಅಂದರೆ 'ಚೋಮನದುಡಿ'ಯ ಮೂಲಕ. ಕಾರಂತರ ಈ 'ಚೋಮನದುಡಿ' ಕಾದಂಬರಿಯನ್ನು ಆಧರಿಸಿ ಬಿ.ವಿ.ಕಾರಂತರು ಸಿನಿಮಾವನ್ನು ನಿರ್ದೇಶಿಸಿದರು. ಇದರ ಚಿತ್ರಕಥೆಯನ್ನು ಮಾತ್ರ ಶಿವರಾಮ ಕಾರಂತರು ಬರೆದಿದ್ದರು. ಆದರೆ ಇಲ್ಲಿ ಸಂಪೂರ್ಣವಾಗಿ ನನ್ನನ್ನು ನಿರ್ಲಕ್ಷಿಸಲಾಗಿತ್ತು ಎಂಬುದಾಗಿ ಶಿವರಾಮ ಕಾರಂತರೆ ಹೇಳಿಕೊಂಡಿದ್ದಾರೆ. 'ಚೋಮನದುಡಿ ' ಚಲನಚಿತ್ರ ಕಲಿಸಿದ ಪಾಠದಿಂದ ಮತ್ತೆ ಸಿನಿಮಾ ಹಂಬಲಕ್ಕೊಳಗಾಗಿ ಒಂದು ಹೆಜ್ಜೆ ಮುಂದುವರೆದು ತಮ್ಮದೇ ಕಾದಂಬರಿಯಾದ 'ಕುಡಿಯರ ಕೂಸು' ಆಧರಿಸಿ 'ಮಲೆಯ ಮಕ್ಕಳು' ಎಂಬ ಸಿನಿಮಾ ತಯಾರಿಸಿದರು.

'ಸೆಪ್ಟೆಂಬರ್ ೧೮' ಎಂಬ ತುಳು ಸಿನಿಮಾದಲ್ಲಿ ಕಾರಂತರು ಪಾತ್ರವಹಿಸಿದ್ದಾರೆ. ಸಿನಿಮಾಗೆ ಸಂಬಂಧಪಟ್ಟಂತೆ ಒಂದು ಅಧ್ಯಯನ ಕಮಿಟಿಗೆ 'ಕಾರಂತರ ಕಮಿಟಿ ' ಎಂದು ಅವರನ್ನು ಅಧ್ಯಕ್ಷರನ್ನಾಗಿ ಮಾಡಲಾಗಿತ್ತು.

ಈ ರೀತಿಯಾಗಿ ಚಲನಚಿತ್ರ ರಂಗದ ಒಳ ಹೊರಗನ್ನು ಗಮನಿಸಿದ ಕಾರಂತರಿಗೆ ಮುಖಾಮುಖಿಯಾದ ಸಂದರ್ಭಗಳನ್ನು ನಾವು ಇಲ್ಲಿ ಗಮನಿಸಬಹುದಾಗಿದೆ. ಸಿನಿಮಾ ಪ್ರಪಂಚವನ್ನು ಕುರಿತು ಅವರೆ ಹೇಳುವ ಮಾತುಗಳು ಇಂದಿಗೂ ಕನ್ನಡಿ ಹಿಡಿದಂತಿವೆ.

> '' ನಮ್ಮವರು ಚಿತ್ರದ ಮೋಹಕತೆಯನ್ನೇನೋ ಕಂಡುಕೊಂಡಿದ್ದಾರೆ. ವ್ಯಾಪಾರದ ಗುಣಗಳನ್ನು ಸಾಧಿಸಿದ್ದಾರೆ. ನಟನು ನಿರ್ದೇಶಕನನ್ನು ಕುಣಿಸುವ ವಿಧಾನ, ನಿರ್ದೇಶಕ ನಟರನ್ನು ವಂಚಿಸುವ ವಿಧಾನ, ಅವರಿಬ್ಬರೂ ಬಂಡವಾಳಗಾರರನ್ನು, ಬಂಡವಾಳಗಾರರೂ ಇವರನ್ನು ಹೊಂಡಕ್ಕೆ ಇಳಿಸುವ ಕ್ರಮಗಳನ್ನು ಕಲಿತಿದ್ದಾರೆ. ಜೊತೆಗೆ ಹಣದ ಶಕ್ತಿಯು ವಿಮರ್ಶೆಯ ಬಾಯಿಯನ್ನು ಅದುಮಿ ಹಿಡಿದಿದೆ. ಜಾಹಿರಾತಿಗಾಗಿ ಬಾಯಿ ಬಿಡುವ ಪತ್ರಕರ್ತರು ನಿರ್ಭೀತ ವಿಮರ್ಶೆಯನ್ನೇನು ಮಾಡಬಲ್ಲರು ? ''[೩]

ಒಂದು ದೊಡ್ಡ ಮಾಯಾಲೋಕದಂತಿರುವ ಸಿನಿಮಾ ಜಗತ್ತು ಇಂದು ಯಾವ -ಯಾವ ಮಾನದಂಡಗಳಿಂದ ಮುನ್ನಡೆಯುತ್ತಿದೆ, ಅದರ ಸಾಧಕ -ಬಾಧಕಗಳನ್ನು ಕುರಿತು ಕಾರಂತರು ಅವರ ಕಾಲಕ್ಕೇ ಮನಗಂಡು ಭವಿಷ್ಯವಾಣಿಯಂತೆ ಈ ಮೇಲಿನ ಮಾತುಗಳಲ್ಲಿ ತಿಳಿಸಿದ್ದಾರೆ. ಸದಭಿರುಚಿಯ, ಸಾಮಾಜಿಕವಾದ, ಕಲಾತ್ಮಕ ಚಲನಚಿತ್ರಗಳು ಜನಪ್ರಿಯತೆಯನ್ನು ಪಡೆಯಲು ಇಂದಿಗೂ ವಿಫಲವಾಗುತ್ತಿರುವುದನ್ನು ಕಾಣಬಹುದಾಗಿದೆ. ಆಸಕ್ತಿಯಿಂದ ಶ್ರಮವಹಿಸಿ ಸಿನಿಮಾ ರಂಗದಲ್ಲಿ ದುಡಿದ ಕಾರಂತರು ಅಲ್ಲಿ ಯಶಸ್ಸನ್ನು ಕಾಣದೆ ಹೋಗಲು ಅಂದಿನ ವಿಭಿನ್ನವಾದ ಸಾಂಸ್ಕೃತಿಕತೆಯೇ ಕಾರಣವಾದುದು. ಇಂತಹದರ ವಿರುದ್ಧವಾಗಿ ಮುಖಾಮುಖಿಯಾಗುತ್ತಾ ಸಾಗಿದ ಕಾರಂತರು ಮತ್ತು ಸಮಾಜದಲ್ಲಿ ಸಾಂಸ್ಕೃತಿಕ ಸಂಘರ್ಷವನ್ನು ಗುರುತಿಸಬಹುದಾಗಿದೆ.

---

<u>ಅಡಿ ಟಿಪ್ಪಣಿಗಳು :</u>

೧. ಗಿರೀಶ್ ಕಾಸರವಳ್ಳಿ , 'ಕಾರಂತ ಕಿರಣ', ಲೇಖನ -ಕಾರಂತರು ಮತ್ತು ಸಿನಿಮಾ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೪, ಪುಟ -೩೫,೩೬.

೨. ಶಿವರಾಮ ಕಾರಂ, 'ಸ್ಮೃತಿ ಪಟಲದಿಂದ ಸಂಪುಟ -೨', ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು ನಗರ ೧೯೭೮, ಪುಟ -೩೮೬.

೩. ಶಿವರಾಮ ಕಾರಂತ, 'ಹುಚ್ಚು ಮನಸ್ಸಿನ ಹತ್ತು ಮುಖಗಳು ' ಎಸ್.ಬಿ.ಎಸ್. ಪಬ್ಲಿಷರ್ಸ್ ಬೆಂಗಳುರು, ೨೦೦೭ (ಹತ್ತನೇ ಮುದ್ರಣ) ಪುಟ -೧೯೭, ೧೯೮.

## ೬.೫. ಪರಿಸರ ಮತ್ತು ಕಾರಂತರು

“ ನಿಸರ್ಗದ ನದಿ, ಕಡಲು, ಬೆಟ್ಟ , ಬಾನುಗಳಲ್ಲಿ ದೊರೆಯುವಷ್ಟು ಶಾಂತಿಯನ್ನು ನಾನು ಗುಡಿಗಳಲ್ಲಿ ಕಂಡಿಲ್ಲ .”

-ಶಿವರಾಮ ಕಾರಂತ

## ೬.೬. ಪರಿಸರ ಮತ್ತು ಕಾರಂತರು

ಕಾರಂತರು ತಮ್ಮ ಕಡೆಯ ದಶಕಗಳಲ್ಲಿ ಪರಿಸರವನ್ನು ಕುರಿತು ಹೆಚ್ಚಾಗಿ ಚಿಂತಿಸಿರುವುದನ್ನು ಅವರ ಆತ್ಮಕಥಾನಕಗಳಲ್ಲಿ ಕಾಣಬಹುದಾಗಿದೆ. ಜಾಗತಿಕ ಮಟ್ಟದಲ್ಲಿ ನಡೆಯುತ್ತಿದ್ದ ಪರಿಸರದ ಪರವಾಗಿ ನಡೆಯುತ್ತಿದ್ದ ಅನೇಕ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದರು. ಅವುಗಳ ಅರಿವು ನಮ್ಮವರಲ್ಲೂ ಮೂಡಿಸುವ ಸಲುವಾಗಿ ಮಾಲಿನ್ಯವನ್ನು ಕುರಿತಾದ ಅನ್ಯ ಭಾಷೆಯ ವರದಿಗಳನ್ನು ಕನ್ನಡಕ್ಕೆ ಅನುವಾದಿಸಿ, ಸ್ವತಃ ಇವರೇ ಅನೇಕ ಲೇಖನಗಳನ್ನು ಬರೆದು ಪ್ರಕಟಿಸಿದರು. ಪೋಕರನ್‌ನಲ್ಲಿನ ಪರಮಾಣು ಬಾಂಬಿನ ಪ್ರಯೋಗ, ನೈಸರ್ಗಿಕ ಸಂಪತ್ತಿನ ನಾಶವನ್ನು ಕುರಿತು, ಆಧುನಿಕ ಔದ್ಯೋಗೀಕರಣದ ಪ್ರಭಾವದಿಂದ ಪರಿಸರದ ಮೇಲಾಗುತ್ತಿರುವಂತಹ ಪರಿಣಾಮಗಳು, ಕಾರ್ನಾಟಕಗಳಲ್ಲಿ ಸ್ಥಾಪಿಸಬೇಕೆಂದಿದ್ದ ಕೈಗಾ ಅಣುಸ್ಥಾವರದ ಬಗ್ಗೆ , ಹೀಗೆ ಪರಿಸರ ನಾಶಕ್ಕೆ ಸಂಬಂಧಿಸಿದ ಯಾವುದೇ ವಿಚಾರದಲ್ಲಿ ಕಾರಂತರು ಪ್ರತಿಕ್ರಿಯಿಸುತ್ತ, ಹೋರಾಟ ಮಾಡುತ್ತಿದ್ದರು. ೧೯೯೨ ನೇ ವರ್ಷದ 'ಪರಿಸರ ರಕ್ಷಣೆ ಪುರಸ್ಕಾರ' ಪ್ರಶಸ್ತಿ ಕಾರಂತರಿಗೆ ಲಭಿಸಿದ್ದು ಅದಕ್ಕೆ ನಿದರ್ಶನವಾಗಿದೆ.

> ''ಪರಿಸರ ವಿನಾಶದಿಂದ ತತ್ತರಿಸುತ್ತಿರುವ ಇಂದಿನ ದಿನಗಳಲ್ಲಿ ಮಾತ್ರವಲ್ಲ ; ಕಾರಂತರ ಆಲೋಚನೆ ಮತ್ತು ಕ್ರಿಯೆಗಳು ಮುಂಬರುವ ತಲೆಮಾರುಗಳಿಗೂ ಮಾರ್ಗದರ್ಶಿಯಾಗಿವೆ. ಕಾರಂತರನ್ನು 'ಪರಿಸರವಾದಿ' ಎಂದು ಕರೆಯುವುದು 'ರೈತ'ನೊಬ್ಬನನ್ನು 'ರೈತವಾದಿ ' ಎಂದು ಕರೆದಷ್ಟೇ ಹಾಸ್ಯಾಸ್ಪದವಾದುದು. ನಮ್ಮ ದೇಶದಲ್ಲಿ ಪರಿಸರವಾದ, ಪರಿಸರ ಚಳುವಳಿಗಳು ಕೂಡ 'ತೋರಿ ಉಂಬ ಲಾಭ ' ವಾಗಿವೆ. ಅಲ್ಲದೆ, ಸಮಗ್ರ ದೃಷ್ಟಿಯ ತೀವ್ರ ಅಭಾವದಿಂದ ನರಳುತ್ತಿರುವ ಪರಿಸರವಾದಿಗಳು ಎಡಬಿಡಂಗಿಗಳಾಗಿ ಕಾಣುತ್ತಾರೆ. ಕೈಗಾ ಅಣುಸ್ಥಾವರವನ್ನು ವಿರೋಧಿಸುವ ಪರಿಸರವಾದಿಗಳೇ, ಪೋಕ್ರಾನ್ ಅಣುಸ್ಫೋಟಕ್ಕೆ ಬಾರಿ ಬೆಂಬಲ ವ್ಯಕ್ತಪಡಿಸಿದ್ದಾರೆ. ಕಾರಂತರ ಅಣುವಿರೋಧಿ ದೃಷ್ಟಿಕೋನ ಐವತ್ತರ ದರ್ಶಕದಿಂದಲೂ (ಪರಮಾಣು ಇಂದು ಮತ್ತು ನಾಳೆ -೧೯೫೨) ಮೂಡಿಬಂದಿದೆ. ಕಾರಂತರ ಪರಿಸರಪ್ರಜ್ಞೆ ಮತ್ತು ದಕ್ಷಿಣ ಕನ್ನಡದ ಪರಿಸರ ಚಳುವಳಿಗಳನ್ನು ವ್ಯಷ್ಟಿ ಮತ್ತು ಸಮಷ್ಟಿಗಳ ಬೆಸುಗೆಯಾಗಿ ನೋಡಬೇಕು ''[೧]

ದ್ವಂದ್ವ ನಿಲುವುಗಳಿಗೆ ಅಂಟಿಕೊಂಡು ಎಡಬಿಡಂಗಿಗಳಾಗಿ ಕಾಣುವಂತಹ ಪರಿಸರವಾದಿಗಳ ಮಧ್ಯೆ ಯಾವುದೇ ರೀತಿಯ 'ಪರಿಸರವಾದಿ' ಎಂಬ ಹಣೆಪಟ್ಟಿಯನ್ನು ಅಂಟಿಸಿಕೊಳ್ಳದೆ ಸಹಜವಾಗಿಯೇ ಪರಿಸರ ಪರವಾದ ಕಾಳಜಿಯನ್ನು ಹೊಂದಿದ್ದರು. ಪರಿಸರಕ್ಕೆ ಮಾರಕವಾಗಬಲ್ಲ ಅದಾವುದೇ ಯೋಜನೆಗಳಿರಲಿ, ಮುಲಾಜಿಲ್ಲದೆ ವಿರೋಧಿಸಿದವರು ಕಾರಂತರು. ಅವರ ಈ ಪರಿಸರ ಪರವಾದ ಆಲೋಚನೆಗಳು ಮತ್ತು ಕ್ರಿಯೆಗಳು ಕೇವಲ ವರ್ತಮಾನಕ್ಕೆ ಮಾತ್ರ ಸೀಮಿತವಾದವುಗಳಾಗಿರದೆ ಮುಂದಿನ ಪೀಳಿಗೆಯವರಿಗೂ ಮಾರ್ಗದರ್ಶನವಾಗಬಲ್ಲವುಗಳು ಎಂದು ಕಾರಂತರ ಸಹಜವಾದಿ ಪರಿಸರವಾದವನ್ನು ಕುರಿತು ಚಂದ್ರಶೇಖರ ವಿ.ನಂಗಲಿಯವರು ಹೇಳಿರುವ ಮಾತುಗಳನ್ನು ಮೇಲಿನ ಉದ್ಧರಣೆಯಲ್ಲಿ ಕಾಣಬಹುದಾಗಿದೆ.

> " ನಿಸರ್ಗವೇ ನಮ್ಮ ಎದುರಿಗೆ ಸುರಳಿ ಬಿಚ್ಚಿಕೊಂಡು ಸಾಗುತ್ತಿದ್ದರೆ ಉಂಟಾಗಬಹುದಾದ ಅನುಭವ ಕಾರಂತರ ಕೃತಿಗಳನ್ನು ಓದುತ್ತಿರುವಾಗ ನನಗೆ ಅನೇಕ ವೇಳೆ ಲಭಿಸಿದೆ. ಅವರ ಬರಹದಲ್ಲಿ ಒಟ್ಟಿನ ಮೇಲೆ ಕಲೆಯ 'ನಿರ್ಮಿತಿ' ಗೀತ ನಿಸರ್ಗದ ಆವಿಷ್ಕೃತಿ ಹೆಚ್ಚು. ಇಲ್ಲಿ ನಿಸರ್ಗವೆಂದರೆ ಕಡಲು, ಬೆಟ್ಟ ,ಹೊಳೆ, ಕಾಡು ಮೊದಲಾದ ಅಚೇತನ ಪ್ರಕೃತಿ ಮಾತ್ರವಲ್ಲ, ವಿವಿಧ ವಿಚಿತ್ರವಾದ ಮಾನವ ಪ್ರಕೃತಿಯೂ ಅವರಲ್ಲಿ ಹಾಸುಹೊಕ್ಕಾಗಿ ಸೇರುತ್ತದೆ "[೨]

ಬದುಕಿನಲ್ಲಿ ಅನುಭವವನ್ನು ಹೆಚ್ಚಾಗಿ ಪಡೆಯಲು ಪರಿಸರದೊಂದಿಗೆ ಹೆಚ್ಚು, ಹೆಚ್ಚು ಬೆರೆಯಬೇಕು ಎಂದು ತಿಳಿದಿದ್ದವರು ಕಾರಂತರು. ಆ ರೀತಿ ಬೆರೆತವರು ಅವರು. ಆ ಸಂದರ್ಭದಲ್ಲಿ ಪರಿಸರವನ್ನು, ಅದರ ಪ್ರಾಮುಖ್ಯತೆಯನ್ನು, ಸೂಕ್ಷ್ಮವಾಗಿ ತಿಳಿಯುತ್ತ ಅದನ್ನು ತಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿ ಬಳಸಿದವರು. ಅವರ ಸಾಹಿತ್ಯದಲ್ಲಿನ ಪ್ರಕೃತಿಯ ಅನುಭವ ಮತ್ತು ಮಾನವನ ಪ್ರಕೃತಿಯ ಅನಾವರಣವನ್ನು ಕುರಿತು 'ಕಾರಂತ ಅರವತ್ತು' ಸಂಪುಟದಲ್ಲಿ ತೀ.ನಂ.ಶ್ರೀಕಂಠಯ್ಯನವರು ಹೇಳಿರುವ ಮಾತುಗಳನ್ನು ಮೇಲಿನ ಉದ್ಧರಣೆಯಲ್ಲಿ ಗಮನಿಸಬಹುದಾಗಿದೆ.

ಕಾರಂತರು ತಮ್ಮ ಬಾಳಿನುದ್ದಕ್ಕೂ ಪ್ರತ್ಯಕ್ಷ ಹಾಗೂ ಪರೋಕ್ಷವಾದ ನೆಲೆಗಳಲ್ಲಿ ಸಮಾಜ ಮುಖಿಯಾಗಿಯೇ ನಡೆದುಬಂದವರು. ಅನೇಕ ರೀತಿಯಾಗಿ ವಿನಾಶವಾಗುತ್ತಿರುವ ಪರಿಸರ ನಾಶವನ್ನು ತೀವ್ರವಾಗಿ ಪ್ರತಿಭಟಿಸಿದರು. ೧೯೮೦ ರ ತರುವಾಯ ತಮ್ಮ ನಾಡಿನ ಪರಿಸರವನ್ನು ಕುರಿತು ವಿಶೇಷವಾಗಿ ದುಡಿಯುವಂತಾಯಿತು ಎಂದು ಅವರು ಜ್ಞಾಪಿಸಿಕೊಂಡಿದ್ದಾರೆ. ಪರಿಸರ ಸಂರಕ್ಷಣೆಯೆನ್ನುವುದು ಬರಿಯ ಆವೇಶದಿಂದ ನಡೆಯುವ ಕಾರ್ಯವಲ್ಲವೆಂದು ಅವರಿಗೆ ತಿಳಿದೇ

ಇತ್ತು. ಹೀಗಾಗಿ ಪರಿಸರಕ್ಕೆ ಆಘಾತವನ್ನುಂಟು ಮಾಡುವ ಅಂಶಗಳ ಬಗೆಗೆ ವಿಸ್ತೃತವಾದ ಮಾಹಿತಿಗಳನ್ನು ಅವರು ಸಂಗ್ರಹಿಸಿದರು. ಅವರ 'ಸ್ಮೃತಿ ಪಟಲದಿಂದ ಸಂಪುಟ -೧ ' ರಲ್ಲಿ 'ನಿಸರ್ಗ ಮತ್ತು ನಾನು' ಎಂಬ ಅಧ್ಯಾಯ ಇವೆಲ್ಲವನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ.

ಪರಿಸರದ ಬಗೆಗೆ ಅವರ ಕಾಳಜಿಗಳು ಹಲವಾರು ರೀತಿಯದಾದ ಕಾರ್ಯವಿಧಾನಗಳಲ್ಲಿ ವ್ಯಕ್ತವಾಗುತ್ತವೆ. ಪರಮಾಣು ಚೈತನ್ಯದ ದೂರಗಾಮಿ ಪರಿಣಾಮಗಳ ಬಗೆಗೆ, ನೈಸರ್ಗಿಕ ಸಂಪತ್ತಿನ ದುರ್ಬಳಕೆಯ ಬಗೆಗೆ ದೇಶದಾದ್ಯಂತ ಎಚ್ಚರಿಕೆಯನ್ನು ಮೂಡಿಸುವ ಪ್ರಯತ್ನವನ್ನು ಮಾಡಿದರು. ಭಾರತದ ಬಾಹ್ಯಾಕಾಶ ಕ್ಷಿಪಣಿಗಳ ಪ್ರಯೋಗಗಳ ವಿರುದ್ಧವಾಗಿ ತಮ್ಮ ಮಿತ್ರರ ಜೊತೆ ಸೇರಿಕೊಂಡು ಈ ದೇಶದ ವರಿಷ್ಠ ನ್ಯಾಯಾಲಯದಲ್ಲಿ ದಾವೆ ಹೂಡಿದರು. ಹರಿಹರದ ಒಲಿಫೈಬರ್ ಕಾರ್ಖಾನೆಯ ವಿರುದ್ಧವಾಗಿಯೂ ಅವರು ನ್ಯಾಯಾಲಯದಲ್ಲಿ ಹೋರಾಟವನ್ನು ನಡೆಸಿದರು. ಈ ರೀತಿಯಾದ ಅವರ ಕಾರ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಾರಂತರ ಅಂತಸ್ಸತ್ವ ವ್ಯಕ್ತಿತ್ವದ ಬಗೆಗೆ ಕೆಲವು ನಿಖರವಾದ ಒಳನೋಟಗಳು ನಮಗೆ ದೊರೆಯುತ್ತವೆ. ತಮ್ಮ ಇಡಿಯ ಬದುಕನ್ನು ಪ್ರಕೃತಿಯ ದೇಣಿಗೆಯೆಂದೇ ತಿಳಿದು ವರ್ತಿಸಿದವರು ಕಾರಂತರು. ಅದರ ಋಣವನ್ನು ತೀರಿಸಲಾರದೆನ್ನುವ ಅರಿವಿದ್ದೂ ಅದರ ಭಾರವನ್ನು ಕಡಿಮೆಗೊಳಿಸುವ ಪ್ರಯತ್ನಗಳಲ್ಲಿ ತೊಡಗಿಕೊಂಡವರು. ತಮಗೆ ಅನ್ಯಾಯವೆಂದು ತೋರಿದ್ದನ್ನು ನಿರ್ಭೀಡೆಯಿಮದ ಪ್ರತಿಭಟಿಸುವ ಮನೋಬಲವನ್ನು ಅವರು ರೂಢಿಸಿಕೊಂಡಿದ್ದರು. ಕೆಡುಕಿನ ಒಂದು ಸೂಕ್ಷ್ಮಾತಿ ಸೂಕ್ಷ್ಮ ಕಣವೂ ಒಟ್ಟು ಸಮಾಜದ ಸ್ವಾಸ್ಥ್ಯವನ್ನು ಕದಡಬಹುದೆಂಬ ಸತ್ಯವನ್ನು ಅರ್ಥ ಮಾಡಿಕೊಂಡು ಕೇಡಿನ ಮೂಲ ನಾಶವನ್ನೇ ಗುರಿಯಾಗಿಸಿಕೊಂಡ ಪರಿಸರ ಕಾಳಜಿಯುಳ್ಳವರ ವಿರಳ ವ್ಯಕ್ತಿತ್ವಗಳ ಸಾಲಿಗೆ ಸೇರುವವರು ಕಾರಂತರು. ತಮ್ಮ ಸುತ್ತಮುತ್ತಲಿನ ಪ್ರತಿಯೊಂದನ್ನೂ ವಿಶಾಲ ವಿಶ್ವದ ಭಿತ್ತಿಯಲ್ಲಿಟ್ಟೇ ನೋಡುವಂತಹ ಸಮಗ್ರ ದೃಷ್ಟಿಯನ್ನು ಬೆಳೆಸಿಕೊಂಡಿದ್ದವರು. ಹೀಗಾಗಿಯೇ ಅಳಿಯುತ್ತಿರುವ ಪ್ರಾಣಿ ಸಂಕುಲ, ಕಲುಷಿತವಾಗಿರುವ ಜಲ ಸಂಪನ್ಮೂಲ, ರಾಸಾಯನಿಕಗಳ ಹಸ್ತಕ್ಷೇಪ, ವನ್ಯ ಸಂಪತ್ತಿನ ವಿನಾಶ, ಸಾಂಸ್ಕೃತಿಕ ಸ್ವತ್ತುಗಳ ಅಪವ್ಯಯ, ನೈಸರ್ಗಿಕ ಸಂಪನ್ಮೂಲಗಳ ಅತಿಯಾದ ಬಳಕೆ ಇವೆಲ್ಲವನ್ನು ದೂರದರ್ಶಿತ್ವದ ಪೂರ್ಣ ದೃಷ್ಟಿಯಲ್ಲಿ ನೋಡಿ ಅವುಗಳ ವಿರುದ್ಧ ಸಂಘರ್ಷಕ್ಕಿಳಿದವರು ಕಾರಂತರು.

ಸೃಷ್ಟಿಯನ್ನು ಸಹನೆ, ಸಮತೆಗಳಿಂದ ಕಾಣುವುದನ್ನು ತಮ್ಮ ಸಮಾಜವು ಅಭ್ಯಾಸ ಮಾಡಿಕೊಳ್ಳಬೇಕೆಂದು ಅವರು ಬಯಸಿದರು. ಆಗ ಎಳೆಯ ಗರುಕೆ ಹುಲ್ಲಿನಲ್ಲೂ ನಮಗೆ ಪ್ರೀತಿಯು ಹುಟ್ಟುತ್ತದೆ, ಕುತೂಹಲಕರವಾದುದೇನೋ ಕಾಣಸುತ್ತದೆ. ಇದು ನನ್ನದು, ನನ್ನ ಬಾಳಿನ ಯಾವುದೋ ಬಿಂದುವಿನೊಂದಿಗೆ ಬೆಸೆದುಕೊಂಡದ್ದು ಎನ್ನುವ ಸಂಬಂಧವು ಸ್ಥಾಪನೆಗೊಳ್ಳುತ್ತದೆ. ಆಪ್ತತ್ವವು ಬೆಳೆಯುತ್ತದೆ. ಈ ಭಾವವನ್ನು ನಮ್ಮ ಶಕ್ಯಾನುಸಾರ ವಿಸ್ತರಿಸುತ್ತಾ ಹೋದರೆ, ಲೋಕಕಲ್ಯಾಣವಾದಂತೆಯೇ ಅಲ್ಲವೇ ? ಎಂದು ಪರಿಸರದೊಂದಿಗಿನ ನಮ್ಮ ಅನುಸಂಧಾನ, ಲೋಕಕಲ್ಯಾಣವನ್ನು ಕುರಿತು ಚಿಂತಿಸಿದವರು ಕಾರಂತರು.

ಅಡಿ ಟಿಪ್ಪಣಿಗಳು :

೧. ಚಂದ್ರಶೇಖರ ನಂಗಲಿ ವಿ. 'ಶಿವರಾಮ ಕಾರಂತ ಸಾಂಸ್ಕೃತಿಕ ಅನುಸಂಧಾನ ', ಲೇಖನ - 'ಕಾರಂತರ ಬದುಕು -ಬರಹದಲ್ಲಿ ಪರಿಸರ ಪ್ರಜ್ಞೆ ', (ಸಂ.) -ಗುರುಲಿಂಗ ಕಾಪಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು -೨೦೦೩, ಪುಟ -೧೯೩.

೨. ಶ್ರೀಕಂಠಯ್ಯ ತೀ.ನಂ., ಕಾರಂತ ಅರವತ್ತು , ೧೯೬೨, ಪುಟ -೧೦.

## ಅಧ್ಯಾಯ - ೨

# ಮುಕ್ತಾಯಕ್ಕೆ ಮುನ್ನ

‘‘ ವಿಶ್ವದಲ್ಲಿ ಜೀವಿಸುತ್ತಿರುವ ಯಾವನೊಬ್ಬ ವ್ಯಕ್ತಿಗೂ ಒಬ್ಬನೇ ಗುರು ಇಲ್ಲದೇ ಹೋದರೂ ಅವನ ಶಿಕ್ಷಣ, ಅನುಭವಗಳೆಲ್ಲವೂ ಆ ವಿಶ್ವದಿಂದಲೇ ಬಂದಿರುತ್ತವೆ. ನಿಸರ್ಗದ ಪ್ರತಿಯೊಂದು ವಸ್ತುವೂ, ಪ್ರತಿಯೊಂದು ಜೀವಿಯೂ, ವ್ಯಕ್ತಿಯು ಚೇತನವಾಗಿ ಬದುಕುತ್ತಿರುವ ಪ್ರತಿಯೊಂದು ಕ್ಷಣವೂ ಬರಹಗಾರನ ಮನೋವೃತ್ತಿಯನ್ನು ಸದಾ ರೂಪಿಸುತ್ತಲೇ ಇರುತ್ತದೆ. ಇತರರೂ ಆ ನಿಯಮಕ್ಕೆ ಹೊರಗಾಗಿಲ್ಲ ’’

-ಶಿವರಾಮ ಕಾರಂತ

## ಮುಕ್ತಾಯಕ್ಕೆ ಮುನ್ನ

ಗತಕಾಲದ ಘಟನೆಗಳನ್ನು ಕುರಿತು ಹೇಳುವ ಆತ್ಮಕಥಾನಕಗಳು ಕೇವಲ ವೈಯಕ್ತಿಕ ವಿಚಾರಗಳ ನಿರೂಪಣೆಯಾಗಿರದೆ, ಆಯಾ ಕಾಲದ ಚರಿತ್ರೆಯನ್ನು ಕಟ್ಟಿಕೊಡುವ ಆಕರಗಳಾಗಿವೆ. ಆ ಚರಿತ್ರೆಯಲ್ಲಿ ಅಂದಿನ ಸ್ಥಿತ್ಯಂತರಗಳು ಅವುಗಳಿಗೆ ಮುಖಾಮುಖಿಯಾಗುವ ಆತ್ಮಕಥನಕಾರರು, ಅವುಗಳ ಪರಿಣಾಮಗಳನ್ನು ಅಲ್ಲಿ ಗುರುತಿಸಬಹುದಾಗಿದೆ. ಅಂತೆಯೇ ಶಿವರಾಮ ಕಾರಂತರ ಆತ್ಮಕಥಾನಕಗಳಲ್ಲಿಯೂ ಸಹ ಸೃಜನಶೀಲವಾದ, ಪ್ರಯೋಗಶೀಲವಾದ ವ್ಯಕ್ತಿತ್ವಕ್ಕೆ ಅಂದಿನ ಸಮಾಜದ ಪ್ರತಿರೋಧಗಳು - ಪರಿಣಾಮಗಳನ್ನು ಈ ನನ್ನ ಅಧ್ಯಯನದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ.

ಕಾರಂತರ ಆತ್ಮಕಥಾನಕಗಳಲ್ಲಿ ದಾಖಲಾಗಿರುವಂತಹ ವಿಚಾರಗಳನ್ನು ಗಮನಿಸಿದಾಗ ಅವರು ಪ್ರಯೋಗ ನಡೆಸಿದ ಪ್ರಮುಖ ಕ್ಷೇತ್ರಗಳನ್ನು ಮುಖ್ಯವಾಗಿಸಿಕೊಂಡು ಆ ಸಾಂಸ್ಕೃತಿಕತೆಗೆ ಅಂದಿನ ಪರಿಸ್ಥಿತಿಗಳು ಯಾವ ಯಾವ ರೀತಿಯಲ್ಲಿ ಮುಖಾಮುಖಿಯಾದವು ಎಂಬುದನ್ನು ಬಿಡಿಸಿಕೊಳ್ಳುವುದರ ಮುಖಾಂತರ ಕಾರಂತರ ವಿಶಿಷ್ಟವಾದ ವ್ಯಕ್ತಿತ್ವವನ್ನು ತಿಳಿದುಕೊಳ್ಳುವುದು ಸಾಧ್ಯವಾಗಿದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಎರಡೂ ಕಾಲಘಟ್ಟದಲ್ಲಿದ್ದ ಕಾರಂತರು ತಮ್ಮನ್ನು ಪ್ರಾರಂಭದಲ್ಲಿ ಪ್ರಯೋಗಗಳಿಗೆ ಒಡ್ಡಿಕೊಂಡಿದ್ದು ಸ್ವಾತಂತ್ರ್ಯಪೂರ್ವದಲ್ಲಿ. ಆ ಸಂದರ್ಭದಲ್ಲಿ ಒಬ್ಬ ದೇಶಭಕ್ತನಾಗಿ ಗಾಂಧೀಜಿಯವರ ಪ್ರಭಾವ, ಅವರ ಸರಳ ಜೀವನ ಎಲ್ಲವನ್ನೂ ರೂಪಿಸಿಕೊಂಡವರು. ವಿದೇಶಿಯರ ವಿರುದ್ಧ ಅನಂತರದಲ್ಲಿ ರೋಗಗ್ರಸ್ತವಾದ ಸಮಾಜ ವ್ಯವಸ್ಥೆಯ ವಿರುದ್ಧ ಸಾಂಸ್ಕೃತಿಕವಾದ ಸಂಘರ್ಷಕ್ಕಿಳಿದುದನ್ನು ಈ ನನ್ನ ಅಧ್ಯಯನದಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ.

ಕಾರಂತರ ಆತ್ಮಚರಿತ್ರೆಗಳು ಬದುಕಿನೊಂದಿಗೆ ಅವರು ನಡೆಸಿದ ಪ್ರಯೋಗಗಳ ವಿಭಿನ್ನವಾದ ವಿಚಾರ ವರದಿಗಳು. ರಾಜಕೀಯ, ಸಾಮಾಜಿಕ ಚಟುವಟಿಕೆಗಳು, ಶಿಕ್ಷಣ ಕ್ಷೇತ್ರದಲ್ಲಿನ

ಪ್ರಯೋಗಗಳು, ಸಾಹಿತ್ಯದ ಮುಖಾಂತರ ಅಭಿವ್ಯಕ್ತಿಸಿದ ಸಾಂಸ್ಕೃತಿಕ ಪ್ರತಿರೋಧಗಳು, ಪತ್ರಿಕೋದ್ಯಮ, ಸಿನಿಮಾ, ರಂಗಭೂಮಿ, ಧಾರ್ಮಿಕ ವಿಚಾರಗಳು, ಪರಿಸರ ಇತ್ಯಾದಿಯಾದ ಹಲವು ಕ್ಷೇತ್ರಗಳಲ್ಲಿನ ಅನುಭವಗಳನ್ನು ಅಭಿವ್ಯಕ್ತಿಸಿದ್ದಾರೆ. ಹಲವಾರು ಬಾರಿ ಅಳಿದುಳಿದ ನೆನಪುಗಳನ್ನು ಸೇರಿಸುತ್ತಾ ಹೋಗಿರುವುದನ್ನು ಗಮನಿಸಬಹುದಾಗಿದೆ. 'ಅವರಸವೇ ನನ್ನ ಸ್ವಭಾವ, ಈ ಸ್ವಭಾವದಿಂದ ದೋಷವನ್ನೂ ಕಂಡಿದ್ದೇನೆ, ಗುಣವನ್ನೂ ಕಂಡಿದ್ದೇನೆ. ಅವರಸರದಿಂದ ಕೆಲಸಗಳಿಗೆ ಲಯ ಬರುವುದಿಲ್ಲ, ಆದರೆ, ಕುಸುರು ಕೆಲಸಗಳಿಗಾಗಿ ನಾನೆಂದೂ ಕುಳಿತಿರಲಾರೆ ' ಎಂದು ಅವರೇ ಹೇಳುವಂತೆ ಘಟನೆಗಳ ಶಿಸ್ತುಬದ್ಧ ನಿರೂಪಣೆಗೆ ಅವರು ಹೆಚ್ಚಿನ ವಿಶೇಷವಾದ ಮಹತ್ವವನ್ನು ಕೊಡದಿರುವುದನ್ನು ಕಾಣಬಹುದಾಗಿದೆ. ಸ್ವಂತ ವಿಚಾರಗಳನ್ನು ಹೇಳಿಕೊಂಡು ಸಾಗುವ ಈ ಆತ್ಮಕಥಾನಕಗಳು ತನ್ನ ಸುತ್ತಮುತ್ತಲಿನ ಅನೇಕ ವಿಚಾರಗಳ ಕಡೆಗೆ ವ್ಯಾಪಿಸಿಕೊಳ್ಳುತ್ತಾ ಸಾಗುವುದರಿಂದ ವಿಶೇಷವಾದ ಮಹತ್ವವನ್ನು ಪಡೆದುಕೊಂಡಿವೆ.

ತಮ್ಮ ಸಂಪೂರ್ಣವಾದ ಬದುಕನ್ನು ಪ್ರಯೋಗಶೀಲ ಚಟುವಟಿಕೆಗಳ ರಂಗಭೂಮಿಯನ್ನಾಗಿಸಿಕೊಂಡು ಸೋಲು-ಗೆಲುವುಗಳನ್ನು ಕಂಡ ಕಾರಂತರ ಆತ್ಮಕಥಾನಗಳಲ್ಲಿ ಈ ಏಳು-ಬೀಳುಗಳಿಗೆ ಕಾರಣವಾಗುವ ಸಮಕಾಲೀನ ಸಮಾಜದ ಆರ್ಥಿಕ, ನೈತಿಕ, ಧಾರ್ಮಿಕ, ಪರಿಸರದ ಚಿತ್ರಣಗಳು ಜೊತೆಗೆ ಸಮಕಾಲೀನ ವ್ಯಕ್ತಿಗಳ ಸಹ ಸ್ಪಂದನಗಳೂ ಬರುವುದರಿಂದ ಅಂದಿನ ಹಲವಾರು ಸಾಂಸ್ಕೃತಿಕತೆಯನ್ನು ಒಳಗುಮಾಡಿಕೊಳ್ಳುತ್ತವೆ.

ಕಾರಂತರು ಈ ಸಮಾಜದಿಂದ ಪಡೆದುದಕ್ಕಿಂತ ಹೆಚ್ಚಾಗಿಯೇ ತಮ್ಮ ಸೇವೆಯನ್ನು ಸಲ್ಲಿಸಿ ಹೋದವರು. ಇಂದಿಗೂ ಹಲವಾರು ವ್ಯಕ್ತಿಗಳಿಗೆ ಪ್ರಭಾವವನ್ನು ಬೀರಿ ಆದರ್ಶ ವ್ಯಕ್ತಿಯಾಗಿರುವುವಂತಹವರು. ಕೆ.ಪಿ. ಪೂರ್ಣಚಂದ್ರ ತೇಜಸ್ವಿಯರ ಮುಂದಿನ ಮಾತು ಅದನ್ನು ಸಮರ್ಥಿಸುತ್ತದೆ - 'ಲೋಹಿಯಾರವರ ತತ್ವ ಚಿಂತನೆ, ಕುವೆಂಪುರವರ ಕಲಾಸೃಷ್ಟಿ ,ಕಾರಂತರ ಜೀವನದೃಷ್ಟಿ ಮತ್ತು ಬದುಕಿನಲ್ಲಿನ ಪ್ರಯೋಗಶೀಲತೆ - ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮಗಳನ್ನುಂಟು ಮಾಡಿರುವಂಥವು. ಬಹುಶಃ ಮುಂಬರುವ ಕಲಾವಿದರಿಗೆ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಚೈತನ್ಯಶಕ್ತಿಯಾಗಬಲ್ಲಂಥವು ಈ ಮೂರೇ ' ಕಾರಂತರ ಜೀವನ ದೃಷ್ಟಿ ಮತ್ತು ಪ್ರಯೋಗಶೀಲತೆ ಅವರ ಆತ್ಮಕಥಾನಕಗಳು ಪ್ರಕಟವಾಗದೇ ಹೋಗಿದ್ದರೆ ಕೇವಲ ಒಬ್ಬ ಸಾಹಿತಿಯ ಮಟ್ಟದಲ್ಲಿ ಮಾತ್ರವೇ ಪರಿಚಯದಲ್ಲಿರುತ್ತಿದ್ದರು. ಅವರ ಆತ್ಮಕಥಾನಕಗಳನ್ನು ಓದದೆ ಇದ್ದಾಗಿನ ಕಾರಂತರಿಗೂ, ಅವನ್ನು ಓದಿದ ಮೇಲೆ ನಮ್ಮ ಮನಸ್ಸಿನಲ್ಲುಳಿಯುವ ಕಾರಂತರಿಗೂ ನಾವು ವ್ಯತ್ಯಾಸಗಳನ್ನು ಗುರ್ತಿಸಿಕೊಳ್ಳಬಹುದಾಗಿದೆ.

ಕಾರಂತರ ಆತ್ಮ ಕಥಾನಕಗಳು ಆತ್ಮ ಪ್ರಶಂಸೆಯನ್ನು ಹೆಚ್ಚಾಗಿ ಪ್ರತಿನಿಧಿಸುತ್ತವೆ ಎಂಬುದಾಗಿ ವಿಮರ್ಶಾವಲಯದಲ್ಲಿ ಕೇಳಿಬಂದರೂ ಅದು ಅಷ್ಟು ಸಮಂಜಸವಾದುದಲ್ಲ. ಏಕೆಂದರೆ ಅವರ ದೃಷ್ಟಿಯಲ್ಲಿ ಮನುಷ್ಯನ ವೈಯಕ್ತಿಕ ಅಸ್ತಿತ್ವದಷ್ಟೇ, ಸಾಮುದಾಯಿಕ ಸದಸ್ಯನಾಗಿ ಅವನ ಇರುವಿಕೆಗೆ ಮಹತ್ವವಿದೆ ಎಂದು ತಿಳಿದವರು. ಸಮಷ್ಟಿ ವಿಶ್ಲೇಷಣೆಯಲ್ಲಿಯೇ ತೊಡಗಿರುವುದನ್ನು ಕಾಣಬಹುದಾಗಿದೆ. ಕಾರಂತರ ಒಡನಾಟದಲ್ಲಿದ್ದ ಶ್ರೀಮತಿ ಮಾಲಿನಿ ಮಲ್ಯ ಅವರೂ ಸಹ ಆತ್ಮಚರಿತ್ರೆಯನ್ನು ಬರೆದರೆ ಕಾರಂತರ ಬಗೆಗೆ ಇನ್ನೂ ಹೆಚ್ಚಿನ ವಿಷಯಗಳನ್ನು ತಿಳಿಯಬಹುದೆನಿಸುತ್ತದೆ.

ಕಾರಂತರು ತಮ್ಮ ಬದುಕಿನುದ್ದಕ್ಕೂ ಆತ್ಮಸಾಕ್ಷಿಗೆ ಬದ್ಧರಾಗಿ ಬದುಕಿದವರು. ಸ್ವಾಭಿಮಾನದ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು. ಸ್ವಂತಿಕೆ, ಆತ್ಮಗೌರವ, ಕ್ರಿಯಾಶೀಲತೆ, ಸೃಜನಶೀಲತೆ, ಸ್ವಾಭಿಮಾನಗಳನ್ನು ರೂಢಿಸಿಕೊಂಡು ಪೋಷಿಸಿಕೊಂಡವರು. ತಮಗನಿಸಿದ ತಮ್ಮ ಮನಸ್ಸಿನ ಸಂವೇದನೆಗಳನ್ನು ಸೂಕ್ಷ್ಮವಾದ ಸ್ತರದಲ್ಲಿ, ನಿಷ್ಠುರ ವಿಮರ್ಶಕ ದೃಷ್ಟಿಯಿಂದ ಗ್ರಹಿಸುತ್ತ ಬದಲಾವಣೆಗಳಿಗೆ ಸದಾ ಸಿದ್ಧರಾಗಿ ನಿಂತ ವಿಶಿಷ್ಟ ವ್ಯಕ್ತಿ ಅವರು. ಗಾಂಧೀವಾದವನ್ನು ಒಪ್ಪಿಕೊಂಡರೂ, ಒಪ್ಪಿಕೊಂಡ ಕ್ರಮದಲ್ಲಿ ಕೂಡ ಅನುಕರಣಶೀಲತೆಯ ಬದಲಿಗೆ ಹರಿತವಾದ ಚಿಂತನೆಗಳ ಹದವಿದೆ. ವೈಚಾರಿಕವಾದ ವೈಜ್ಞಾನಿಕವಾದ ಶಿಸ್ತಿದೆ. ಹೀಗಾಗಿಯೇ ಗಾಂಧೀಜಿಯವರ ಹೇಳಿಕೆಗಳನ್ನು ಪ್ರಶ್ನಾತೀತವಾಗಿ ನೋಡುವುದೂ, ಅಂಧಶ್ರದ್ಧೆ, ಸಂಪ್ರದಾಯವು ಬೋಧಿಸಿದ ಧಾರ್ಮಿಕ ಕ್ರಿಯಾಕರ್ಮಗಳನ್ನು ಕುರುಡಾಗಿ ಆಚರಿಸದೆ, ಬೋಧಿಸದೆ ಬದುಕಿನ ಶ್ರೇಷ್ಠತೆಯ, ಸಾರ್ಥಕತೆಯ ಮಾರ್ಗದಲ್ಲಿ ನಡೆದರು. ಅವರ ಆ ಆದರ್ಶವಾದಂತಹ, ಮಾದರಿಯಾಗಬಲ್ಲಂತಹ ಬದುಕಿನ ರೀತಿ ನಮಗೆ ಬಹಳಮುಖ್ಯವಾದುದು. ಅದರ ಮೂಲಕ ನನ್ನ ಅಧ್ಯಾಯಕ್ಕೆ ಒಳಪಡಬಹುದಾದ ವಿಚಾರಗಳನ್ನಷ್ಟೇ ನಾನು ಶೋಧಿಸಲು ಪ್ರಯತ್ನಿಸಿದ್ದೇನೆ.

ಕಾರಂತರ ಸಾಮಾಜಿಕ ಪ್ರಜ್ಞೆಯ ಅಂದಿನ ಕಾಳಜಿಗಳು ಇಂದಿಗೂ ಸಹ ಪ್ರಸ್ತುತವಾದಂತಹವುಗಳಾಗಿವೆ. ಸಾಮಾನ್ಯವಾಗಿ ಗಮನಿಸಿದಾಗ ಯಾವುದೇ ಒಬ್ಬ ಸಾಮಾಜಿಕ ಕಾರ್ಯಕರ್ತನಿಗೆ ಸಮಷ್ಟಿ ಕಲ್ಯಾಣದ ನೆಲೆ ಅನಿವಾರ್ಯವಾದುದು. ಅಂತಹ ಸಂದರ್ಭಗಳಲ್ಲಿ ವೈಯಕ್ತಿಕ ಹಿತಾಸಕ್ತಿಗಳನ್ನು ತೊರೆಯಲೂ ಸಿದ್ಧನಾಗಿರಬೇಕು. ಈ ಅಂಶಗಳು ಕಾರಂತರಲ್ಲಿ ಇರುವುದನ್ನು ಅವರು ನಡೆಸಿಕೊಂಡು ಬಂದಂತಹ ಕಾರ್ಯಚಟುವಟಿಕೆಗಳು ಪುಷ್ಟೀಕರಿಸುತ್ತವೆ. ಜೀವನ ಪೂರ್ತಿ ಅಂಧಕಾರದಲ್ಲಿ ಮುಳುಗಿ, ನಿಕೃಷ್ಟವಾದ ಜೀವನ ನಡೆಸಬೇಕಾಗಿ ಬರುತ್ತಿದ್ದಂತಹ ಬಾಲ ವಿಧವೆಯರಿಗೆ, ವೇಶ್ಯೆಯರಿಗೆ ವಿವಾಹಗಳನ್ನು ಮಾಡಿಸಲು ಮುಂದಾದರು. ಅಸ್ಪೃಶ್ಯತಾ

ನಿವಾರಣೆಗೆ ಶ್ರಮಿಸಿದರು. ಹಲವಾರು ಜನ ಜಾಗೃತಿ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡರು. ಗ್ರಾಮೋದ್ಧಾರಕ್ಕಾಗಿ ಅನೇಕ ಶಾಂತಿ ಶಿಬಿರಗಳನ್ನು ನಡೆಸಿದರು. ಹುಡುಗರನ್ನು ಸಮಾಜ ಸೇವೆಗಾಗಿ ತರಬೇತುಗೊಳಿಸಿದರು. ಮದ್ಯಪಾನ ನಿಷೇಧಕ್ಕಾಗಿ ಹೋರಾಟಗಳನ್ನು ನಡೆಸಿದರು. ಜನರಲ್ಲಿದ್ದ ಮೂಢನಂಬಿಕೆಗಳ ವಿರುದ್ಧ ಜಾಗೃತಿಯನ್ನು ಮೂಡಿಸಿದರು. ಇಂತಹ ಸಮಾಜಮುಖಿಯಾದ ಕಾರ್ಯಗಳನ್ನು ಮಾಡುವಂತಹ ಸಂದರ್ಭದಲ್ಲಿ ಅಂದಿನ ಸಮಾಜದ ಅನೇಕ ರೀತಿಯ ಪ್ರತಿರೋಧಗಳನ್ನು ಸಹಜವಾಗಿಯೇ ಕಾರಂತರು ಎದುರಿಸಬೇಕಾಗಿ ಬಂದಿತ್ತು. ಆದುದರಿಂದ ಅಲ್ಲಿನ ಸಾಂಸ್ಕೃತಿಕ ಸಂಘರ್ಷಗಳನ್ನು ಗುರ್ತಿಸಲು ಅವರ ಸಮಾಜ ಸುಧಾರಣೆಯ ಸಾಮಾಜಿಕ ನೆಲೆಯಲ್ಲಿನ ಸಂಘರ್ಷಗಳನ್ನು ಈ ನನ್ನ ಸಂಪ್ರಬಂಧದಲ್ಲಿ ಚರ್ಚಿಸಿದ್ದೇನೆ.

ದೇಶದ ಅಭಿವೃದ್ಧಿಯ ಕ್ಷೇತ್ರಗಳಲ್ಲಿ ಆ ದೇಶದ ಶಿಕ್ಷಣ ಕ್ಷೇತ್ರವೂ ಪ್ರಮುಖವಾದುದು. ಆ ಕ್ಷೇತ್ರದಲ್ಲೂ ಕಾರಂತರು ಹಲವಾರು ರೀತಿಯ ಪ್ರಯೋಗಗಳನ್ನು ನಡೆಸಿದವರು ಎಂಬುದು ನಮಗೆಲ್ಲರಿಗೂ ತಿಳಿದ ವಿಷಯವೇ. ಆ ಪ್ರಯೋಗಗಳಿಗೆ ಅಂದಿನ ಅನೇಕ ವಿಚಾರಗಳು ಮುಖಾಮುಖಿಯಾದಂತಹದೂ ಮುಖ್ಯವಾದುದೇ ಆಗಿದೆ. ಎಳೆಯ ಮಕ್ಕಳಲ್ಲಿ ವಿಶೇಷವಾದ ಆಸಕ್ತಿ-ಅಭಿರುಚಿಗಳನ್ನು ಬೆಳೆಸದೆ ಹೋದರೆ ಮುಂದಿನ ಪ್ರೌಢ ಶಿಕ್ಷಣವು ಒದ್ದೆ ಮಣ್ಣಿನ ಪಾಯದ ಮೇಲೆ ಕಟ್ಟಿದ ಕೆಲವೇ ದಿನಗಳಲ್ಲಿ ಕುಸಿಯುವ ಗೋಪುರವಾದೀತು ಎಂದು ತಿಳಿದಿದ್ದ ಕಾರಂತರು ಪ್ರಾಥಮಿಕ ಹಂತದಲ್ಲಿಯೇ ಅವರ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾದ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡದ್ದನ್ನು ಅವರ ಆತ್ಮಕಥಾನಕಗಳು ದಾಖಲಿಸುತ್ತವೆ. ಅವುಗಳ ಮುಖಾಂತರವಾಗಿ ಸಾಂಸ್ಕೃತಿಕ ಪ್ರತಿರೋಧಗಳನ್ನು ಗುರ್ತಿಸಿಕೊಳ್ಳಬಹುದಾಗಿದೆ.

ಸಮಾಜದ ಸ್ವಸ್ಥ ಆರೋಗ್ಯಪೂರ್ಣವಾದ ಸಂರಕ್ಷಣೆಗಾಗಿ ಎಲ್ಲಾ ರೀತಿಯ ಸಾಧನಗಳನ್ನು ಬಳಸಿಕೊಂಡವರು ಕಾರಂತರು. ಅವರ ಸಾಹಿತ್ಯವೂ ಸಹ ಇಂತಹ ಒಂದು ಸಾಧನವಾಗಿಯೇ ಕಾರ್ಯನಿರ್ವಹಿಸುತ್ತದೆ. ಅವರ ವಿಪುಲವಾದ ಸಾಹಿತ್ಯದಲ್ಲಿ ಅವರ ಕಾಳಜಿಗಳನ್ನು ಗುರ್ತಿಸಬಹುದಾಗಿದೆ. ಅವರು ಚಿತ್ರಿಸುವ ಪಾತ್ರಗಳು, ಸನ್ನಿವೇಶಗಳು, ಕಥೆಗಳ ವಸ್ತು ವಿಷಯಗಳು, ಅಭಿವ್ಯಕ್ತಿಸುವ ಧೋರಣೆಗಳನ್ನು ಸ್ವತಃ ಕಾರಂತರೇ ಆತ್ಮಕಥಾನಕಗಳಲ್ಲಿ ಹೇಳಿಕೊಂಡಿರುವ ಹಿನ್ನೆಲೆಯಲ್ಲಿ ನನ್ನ ಸಂಪ್ರಬಂಧಕ್ಕೆ ಪೂರಕವಾದ ವಿಚಾರಗಳನ್ನು ಚರ್ಚೆಗೆ ಒಳಗು ಮಾಡಿಕೊಂಡಿದ್ದೇನೆ.

ಇತರೆ ಕ್ಷೇತ್ರಗಳಂತೆ ನಾಟಕ ಕ್ಷೇತ್ರದಲ್ಲೂ ಕಾರಂತರದು ವಿಶೇಷವಾದ ಆಸಕ್ತಿ. ತಮ್ಮ ಸುತ್ತಾಟದ ದಿನಗಳಲ್ಲಿ ರಂಗ ಚಟುವಟಿಕೆಗಳ ಬಗೆಗೆ ಬಹುವಾಗಿ ಆಕರ್ಷಿತರಾದ ಅವರು

ಅದರಲ್ಲಿಯೂ ಪ್ರಯೋಗಗಳನ್ನು ಮಾಡತೊಡಗಿದರು. ಅವರ ಈ ಪ್ರಯೋಗಶೀಲತೆಗೆ ಸಾಂಸ್ಕೃತಿಕ ಪ್ರತಿರೋಧಗಳು ಸಹಜವಾಗಿಯೇ ಎದುರಾದುದರಿಂದ 'ರಂಗಭೂಮಿಯಲ್ಲಿ ಕಾರಂತರು' ಎಂಬುದಾಗಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ.

ದೇವರ ಕಲ್ಪನೆಯನ್ನು ಭೀತಿಯಿಂದ ಹುಟ್ಟಿದ ಮನೋಧರ್ಮವೆಂದು ನೇರವಾಗಿಯೇ ಖಂಡಿಸುತ್ತ, ಬದುಕಿನ ಸಾರ್ಥಕತೆ ಅಡಗಿರುವುದು ಮನುಷ್ಯ ಸಮಾಜಮುಖಿಯಾದಾಗ, ಬದುಕನ್ನು ನಿರಾಕರಿಸದೆ ಸ್ವೀಕರಿಸಿದಾಗ ಎಂದು ಬದುಕಿನ ಮಹತ್ವವನ್ನು ವಿಶೇಷವಾಗಿ ಸಾರಿದವರು ಕಾರಂತರು. ಅವರು ಧಾರ್ಮಿಕ ವಿಚಾರಗಳಲ್ಲಿ ಯಾವ ರೀತಿಯ ಮನಸ್ಸನ್ನು ಹೊಂದಿದ್ದರು ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದೇನೆ. ಪತ್ರಿಕೋದ್ಯಮದ ಮೂಲಕ, ಸಿನಿಮಾ ಕ್ಷೇತ್ರದ ಮೂಲಕ, ಯಾವ ರೀತಿಯದಾದ ಸಾಂಸ್ಕೃತಿಕ ಸಂಘರ್ಷಗಳನ್ನು ಎದುರಿಸಿದರು ಎಂಬುದನ್ನು ನನ್ನ ಈ ಸಂಪ್ರಬಂಧದ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ.

ಬದುಕಿನಲ್ಲಿ ಅನುಭವವನ್ನು ಹೆಚ್ಚಾಗಿ ಪಡೆಯಲು ಪರಿಸರದೊಂದಿಗೆ ಹೆಚ್ಚು ಹೆಚ್ಚು ಬೆರೆಯಬೇಕು ಎಂದು ತಿಳಿದಿದ್ದವರು ಕಾರಂತರು ಆ ತತ್ವವನ್ನು ಸಾಹಿತ್ಯದ ಮುಖಾಂತರವಷ್ಟೇ ಅಲ್ಲದೆ ನೇರವಾಗಿ ತಿಳಿಸುತ್ತ ಬಂದವರು. ಪರಿಸರಕ್ಕೆ ಮಾರಕವಾಗಬಲ್ಲ ವಿಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತ ಬಂದವರು. ಅವರ ಆ ಕಾಳಜಿಗಳಿಗೆ ಪ್ರತಿಯಾದ ನೆಲೆಗಳನ್ನು ಚರ್ಚಿಸಿದ್ದೇನೆ.

''ಸಂಸ್ಕೃತಿ ಚಿಂತಕ ಸೃಜನಶೀಲ ಸಾಹಿತಿಯೂ ಆಗಿದ್ದಾಗ ಎದುರಿಸಬೇಕಾಗಿ ಬಂದ ಹಾಗೂ ಬರುವ ಸಂಕೀರ್ಣ ಸ್ವರೂಪದ ಸಮಸ್ಯೆಗಳ ಅಧ್ಯಯನವು ಕನ್ನಡದಲ್ಲಿ ಹೆಚ್ಚು ಗಂಭೀರ ನೆಲೆಯಲ್ಲಿ ನಡೆಯಬೇಕಾಗಿದೆ. ಇದು ಆಧುನಿಕ ಕನ್ನಡ ಸಾಹಿತ್ಯದ 'ಸಾಹಿತ್ಯಿಕ' ಮಹತ್ವಕ್ಕಿಂತ 'ಸಾಂಸ್ಕೃತಿಕ' ಮಹತ್ವದ ಬಗ್ಗೆ ಹೆಚ್ಚಿನ ಅರಿವನ್ನು ಸೋಸಿಕೊಳ್ಳುವುದಕ್ಕೆ ಅನುಕೂಲವಾದೀತು. ಅಂಥ ಅಧ್ಯಯನ ನಡೆದಿಲ್ಲ ಎಂದೇನಿಲ್ಲ. ಆದರೆ ನಡೆಯಬೇಕಾದಷ್ಟು ಅಥವಾ ನಡೆಯಬಹುದಾದಷ್ಟು ನಡೆದಿಲ್ಲ. ಕಾರಂತರ ಚಿಂತನ ಬರಹಗಳು, ಸೃಜನಶೀಲ ಬರಹಗಳು, ಅವರ ವಿಜ್ಞಾನ ಸಂಬಂಧವಾದ ಬರಹಗಳು, ಅವರು ಕಲೆಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಮಾಡಿದ ಪ್ರಯೋಗಗಳು ಮತ್ತು ಚಿಂತನೆಗಳು ಅಂದರೆ ಒಟ್ಟಿನಲ್ಲಿ ಕಾರಂತರ ಸಂಸ್ಕೃತಿ ಸಂಬಂಧವಾದ ಸಮಗ್ರ ಸೃಜನಶೀಲತೆ, ಸೃಜನೇತರ ದಾಖಲಿತ ಚಟುವಟಿಕೆಗಳು ಅಂಥ ಗಂಭೀರ ಅಧ್ಯಯನವನ್ನು ಎದುರು ನೋಡುತ್ತಿವೆ '' ಎಂಬ ಪ್ರೊ. ಜಿ.ಹೆಚ್. ನಾಯಕ್ ಅವರ ಮಾತುಗಳಲ್ಲಿ ಸಾಂಸ್ಕೃತಿಕ ಮಹತ್ವವಾದ ವಿಚಾರಗಳನ್ನು

ಗುರ್ತಿಸಿಕೊಳ್ಳುವಲ್ಲಿ ಕಾರಂತರ ಸಂಸ್ಕೃತಿ ಸಂಬಂಧವಾದ ಅಧ್ಯಯನಗಳು ನಿರೀಕ್ಷಿತವಾದ ಮಟ್ಟದಲ್ಲಿ ನಡೆದಿಲ್ಲ ಎಂಬುದನ್ನು ಗುರ್ತಿಸಬಹುದು. ಈ ನೆಲೆಯಲ್ಲಿ ನನ್ನ ಅಧ್ಯಯನದ ವಿಷಯವನ್ನು ಚರ್ಚಿಸಲು ಪ್ರಯತ್ನಿಸಿದ್ದೇನೆ.

ಕಾರಂತರ - 'ಹುಚ್ಚು ಮನಸ್ಸಿನ ಹತ್ತು ಮುಖಗಳು', 'ಅಳಿದುಳಿದ ನೆನಪುಗಳೊಂದಿಗೆ ', 'ಸ್ಮೃತಿ ಪಟಲದಿಂದ ಸಂಪುಟ -೧,೨,೩ ' ಎಂಬ ಆತ್ಮಕಥಾನಕಗಳನ್ನು ಪ್ರಮುಖವಾದ ಆಕರ ಗ್ರಂಥಗಳನ್ನಾಗಿ ಮಾಡಿಕೊಂಡಿದ್ದೇನೆ. ಆದರೂ ಸಹ ಅವರ ಬಗೆಗೆ ಇನ್ನೂ ಹೆಚ್ಚಿನ ವಿವರಗಳನ್ನು ಕಟ್ಟಿಕೊಡುವಂತಹ ಅವರ ಪತ್ನಿಯಾದ ಲೀಲಾ ಕಾರಂತರ - 'ಲೀಲಾ ಕಾರಂತರ ನೆನಪಿನ ಸಂಪುಟ', ಕಾರಂತರ ಅಣ್ಣನಾದ ಕೋಟ ಲಕ್ಷ್ಮೀನಾರಾಯಣ ಕಾರಂತರ ಆತ್ಮಕಥೆಯಾದ - 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು', ಶ್ರೀಮತಿ ಮಾಲಿನಿ ಮಲ್ಯ ಅವರ ಕೆಲವು ಬರಹಗಳನ್ನು ಪ್ರಮುಖವಾಗಿ ಪರಾಮರ್ಶೆಗೆ ಒಳಗು ಮಾಡಿಕೊಂಡಿದ್ದೇನೆ. ನನ್ನ ಅಧ್ಯಯನಕ್ಕೆ ಪೂರಕವಾದ ವಿಚಾರಕ್ಕೆ ಸಂಬಂಧಿಸಿದಂತೆ ಕಾರಂತರ ಸೃಜನಶೀಲ ಮತ್ತು ಸೃಜನೇತರವಾದ ಎಲ್ಲಾ ಚಟುವಟಿಕೆಗಳನ್ನು ಗಮನಿಸಲು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯಿಂದ ಸಾಧ್ಯವಾಗದ ಕಾರಣ ಪ್ರಾತಿನಿಧಿಕವಾಗಿ ಕೆಲವನ್ನು ಗಮನಿಸುವ ಪ್ರಯತ್ನ ಮಾಡಿದ್ದೇನೆ. ಜೊತೆಗೆ ನನ್ನ ಸಂಪ್ರಬಂಧಕ್ಕೆ ಸಹಾಯವಾಗಬಲ್ಲ ಇತರ ಆತ್ಮಕಥಾನಕಗಳು ಮತ್ತು ವಿಮರ್ಶಾ ಕೃತಿಗಳನ್ನು ಸಹ ಪರಾಮರ್ಶಿಸಿ ಪೂರಕವಾಗಬಲ್ಲ ವಿಚಾರಗಳನ್ನು ತೆಗೆದುಕೊಂಡಿದ್ದೇನೆ.

ಕಾರಂತರ ಆತ್ಮಕಥಾನಕಗಳ ಹಿನ್ನೆಲೆಯಲ್ಲಿ , ಆ ಶತಮಾನದ ಸಾಂಸ್ಕೃತಿಕ ಸಂಘರ್ಷದ ಎಳೆಯಲ್ಲಿ , ನನ್ನ ಅಧ್ಯಯನದ ಉದ್ದೇಶ, ವ್ಯಾಪ್ತಿ, ಕಾಲದ ಮಿತಿಯಿಂದಾಗಿ ಅವರ ಮತ್ತು ಅಂದಿನ ಸಮಾಜದ ಕೆಲವು ಒಳಹುಗಳನ್ನು ಕಟ್ಟಿಕೊಡುವ ಸಂಶೋಧನಾತ್ಮಕವಾದ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದೇನೆ. ಕಾರಂತರ ಬಗೆಗಿನ ಹೆಚ್ಚಿನ ವಿಸ್ತೃತ ಅಧ್ಯಯನವನ್ನು ಮಾಡಬಯಸುವವರಿಗೆ ಈ ನನ್ನ ಸಂಪ್ರಬಂಧವು ಸಹಕಾರಿಯಾದರೆ ನನ್ನ ಈ ಕೆಲಸ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

## ಆಕರ ಗ್ರಂಥಗಳು


೧. ಶಿವರಾಮ ಕಾರಂತ : 'ಹುಚ್ಚು ಮನಸ್ಸಿನ ಹತ್ತು ಮುಖಗಳು' 'ಅಳಿದುಳಿದ ನೆನಪುಗಳೊಂದಿಗೆ ', ಎಸ್.ಬಿ.ಎಸ್.ಪಬ್ಲಿಷರ್ಸ್, ಬೆಂಗಳೂರು, ೨೦೦೭ (ಹತ್ತನೇ ಮುದ್ರಣ ).

೨. ಶಿವರಾಮ ಕಾರಂತ : 'ಸ್ಮೃತಿ ಪಟಲದಿಂದ - ಭಾಗ -೧' ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು, ೧೯೭೭.

೩. ಶಿವರಾಮ ಕಾರಂತ : 'ಸ್ಮೃತಿ ಪಟಲದಿಂದ - ಭಾಗ -೨' ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು, ೧೯೭೮.

೪. ಶಿವರಾಮ ಕಾರಂತ : 'ಸ್ಮೃತಿ ಪಟಲದಿಂದ - ಭಾಗ -೩' ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು, ೧೯೭೯.

## ಪರಾಮರ್ಶನ ಲೇಖನಗಳು :


೧. ರವೀಂದ್ರನಾಥ ಠಾಗೂರ್ : 'ನಿಬಂಧಮಾಲಾ ಭಾಗ -೧ '
(ಕನ್ನಡಕ್ಕೆ ಅನುವಾದ - ಸ್ವಾಮಿ ಶಂಕರಾನಂದ ಸರಸ್ವತಿ)
ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೬.

೨. ಶ್ರೀನಿವಾಸ ಹಾವನೂರು : 'ಹೊಸಗನ್ನಡದ ಅರುಣೋದಯ ',
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

೩. ಶಿವಾರೆಡ್ಡಿ ಕೆ.ಸಿ. : 'ಕನ್ನಡ ಹಾಡುಪಾಡು ',
ಅಧ್ಯಯನ ಮಂಡಲ, ಬೆಂಗಳೂರು, ೨೦೦೩.

೪. ಮಾಲಿನಿ ಮಲ್ಯ : 'ಶಿವರಾಮ ಕಾರಂತ '
(ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ
ಲೇಖಕರ ಮಾಲಿಕೆ ), ನವ ಕರ್ನಾಟಕ ಪ್ರಕಾಶನ,
ಬೆಂಗಳೂರು, ೨೦೦೭.

೫. ಸೀತಾರಾಮಯ್ಯ ವಿ. : ನವೋದಯ ಪ್ರಚಾರ ಪುಸ್ತಕ ಮಾಲೆ -೪,
'ಶಿವರಾಮ ಕಾರಂತ ' ಮಹಾತ್ಮಗಾಂಧೀ
ಮೆಮೋರಿಯಲ್ ಕಾಲೇಜು, ಉಡುಪಿ, ೧೯೫೫.

೬. ಅಶೋಕ ಟಿ.ಪಿ. : 'ಶಿವರಾಮ ಕಾರಂತ - ಎರಡು ಅಧ್ಯಯನಗಳು '
ಅಕ್ಷರ ಪ್ರಕಾಶನ, ಹೆಗ್ಗೋಡು -ಸಾಗರ
ಕರ್ನಾಟಕ, ೧೯೯೨.

೭. ತಾಳ್ತಜೆ ವಸಂತಕುಮಾರ : 'ಶಿವರಾಮ ಕಾರಂತ ',
(ಜ್ಞಾನಪೀಠ ಪ್ರಶಸ್ತಿ ವಿಜೇತರ ಮಾಲಿಕೆ ) ಕರ್ನಾಟಕ ಸಾಹಿತ್ಯ
ಅಕಾಡೆಮಿ, ಬೆಂಗಳುರು, ೨೦೦೩.

೮. ವೆಂಕಟಾಚಲಶಾಸ್ತ್ರಿ, ಟಿ.ವಿ. (ಪ್ರ.ಸಂ.) : 'ಕಾರಂತ ಕಿರಣ ',
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,೨೦೦೪.

೯. ಅಶೋಕ ಟಿ.ಪಿ. : 'ಪುಸ್ತಕ ಪ್ರೀತಿ '
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೧೯೯೩.

೧೦. ಗುರುಲಿಂಗ ಕಾಪಸೆ (ಸಂ.) : 'ಶಿವರಾಮ ಕಾರಂತ -ಸಾಂಸ್ಕೃತಿಕ ಅನುಸಂಧಾನ '
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು , ೨೦೦೩.

೧೧. ಮಾಲಿನಿ ಮಲ್ಯ (ಸಂ.) : 'ಶಿವರಾಮ ಕಾರಂತ ವಾಙ್ಮಯ ವೃತ್ತಾಂತ '
ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್ ,ಬೆಂಗಳೂರು, ೧೯೯೨.

೧೨. ಪುಟ್ಟಯ್ಯ ಬಿ.ಎಂ. : 'ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ '
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ , ೧೯೯೯.

೧೩. ಶಿವರಾಮ ಕಾರಂತ : 'ಯಕ್ಷಗಾನ ಬಯಲಾಟ ',
ಐ.ಬಿ.ಎಚ್. ಪ್ರಕಾಶನ, ಬೆಂಗಳೂರು - ೧೯೭೪.

೧೪. ಲೀಲಾಭಟ್ ಬಿ. (ಸಂ.) : 'ಲೀಲಾ ಕಾರಂತ ನೆನಪಿನ ಸಂಪುಟ '
ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು,
ಪುತ್ತೂರು, ೨೦೦೧.

೧೪. ಲೀಲಾಭಟ್ ಬಿ. (ಸಂ.) : 'ಲೀಲಾ ಕಾರಂತ ನೆನಪಿನ ಸಂಪುಟ '
ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು,
ಪುತ್ತೂರು, ೨೦೦೧.

೧೫. ಕೋಟ ಲಕ್ಷ್ಮೀನಾರಾಯಣ ಕಾರಂತ : 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು '
ಅಕ್ಷರ ಪ್ರಕಾಶನ, ಹೆಗ್ಗೋಡು -ಸಾಗರ, ಕರ್ನಾಟಕ, ೧೯೮೭.

೧೬. ಇನಾಂದಾರ್ ವಿ.ಎಂ. : 'ಶಿವರಾಮ ಕಾರಂತ ಬದುಕು -ಬರಹ '
ರಾಷ್ಟ್ರಕವಿ ಗೋವಿಂದಪೈ ಸ್ಮಾರಕ ಸಂಶೋಧನಾ ಕೇಂದ್ರ,
ಉಡುಪಿ, ೧೯೭೮.

*************************

